KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಫೆಬ್ರವರಿ ೧೨, ೨೦೦೯ (ಮಾಘ ೨೩, ಶಕ ವರ್ಷ ೧೯೩೦) | ಸಂಚಿಕೆ ೭ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಕೆ.ಪಿ. ಹೊನಕೇರಿ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ ಹಾಸನ (ಹಾಲಿ ಪ್ರಾಂಶುಪಾಲರು, ಜಿಲ್ಲಾ ತರಬೇತಿ ಸಂಸ್ಥೆ, ಚಿಕ್ಕಮಗಳೂರು) ಇವರ ವಿರುದ್ಧ ದಾಖಲಾದ ದಾಳಿ ಪ್ರಕರಣ ಮತ್ತು ಅವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** 1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರ ಪತ್ರ ಸಂ: ಲೋಕ್: ಐಎನ್‌ವಿ(ಜಿ): ಎಂ–15, ಸಿಆರ್–02 2008, ಹಾಸನ ದಿ: 9–4–2008.

**ಪ್ರಸ್ತಾವನೆ :**

ಶ್ರೀ ಕೆ.ಪಿ. ಹೊನಕೇರಿ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ, ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಹಾಸನ, ಹಾಲಿ ಪ್ರಾಂಶುಪಾಲರು, ಜಿಲ್ಲಾ ತರಬೇತಿ ಸಂಸ್ಥೆ, ಚಿಕ್ಕಮಗಳೂರು ಇವರು ತಮ್ಮ ಬಲ್ಲ ಮೂಲಗಳಿಗಿಂತ ಅಪಾರ ಪ್ರಮಾಣದ ಅಧಿಕ ಆಸ್ತಿಯನ್ನು ಹೊಂದಿದ್ದಾರೆಂದು ತಿಳಿದು ಬಂದ ಹಿನ್ನಲೆಯಲ್ಲಿ ಹಾಸನ ಲೋಕಾಯುಕ್ತ ಪೊಲೀಸರು ಇವರ ವಿರುದ್ಧ ಮೊಕದ್ದಮೆ ಸಂ: 2/2008ರಲ್ಲಿ ಪ್ರಕರಣ ದಾಖಲಿಸಿಕೊಂಡು ಭ್ರಷ್ಟಾಚಾರ ನಿಯಂತ್ರಣ ಕಾಯ್ದೆ 1988ರ ಕಲಂ 13(1)(ಇ) ಹಾಗೂ 13(2) ರಡಿ ಶ್ರೀ ಕೆ.ಪಿ. ಹೊನಕೇರಿ, ಕೆ.ಎ.ಎಸ್. ಇವರ ಮನೆ ಮತ್ತು ಕಛೇರಿಗಳ ಮೇಲೆ ದಿ: 26–3–08 ರಂದು ದಾಳಿ ನಡೆಸಿ ಇವರ ವಿರುದ್ಧ ಪ್ರಕರಣ ದಾಖಲಿಸಿಕೊಂಡಿರುವುದಾಗಿ ಮೇಲೆ ಓದಲಾದ ಕ್ರಮ ಸಂ: (1)ರ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ರವರು ವರದಿ ಮಾಡಿರುತ್ತಾರೆ. ಸದರಿ ವರದಿಯಲ್ಲಿ ಶ್ರೀ ಕೆ.ಪಿ. ಹೊನಕೇರಿ, ಕೆ.ಎ.ಎಸ್. ಇವರು ತಮ್ಮ ಬಲ್ಲ ಮೂಲಗಳಿಗಿಂತ ಸುಮಾರು ಶೇಕಡ 358 ರಷ್ಟು ಅಧಿಕ ಆದಾಯವನ್ನು ಹೊಂದಿರುತ್ತಾರೆ ಎಂದು ವರದಿ ಮಾಡಿರುತ್ತಾರೆ. ಇದರಿಂದಾಗಿ ಸದರಿಯವರ ಮೇಲೆ ಭ್ರಷ್ಟಾಚಾರ ನಿರೋಧ ಕಾಯ್ದೆ 1988ರ ಕಲಂ 13(1)(ಇ) ಜೊತೆಗೆ 13(2)ರಡಿ ಶಿಕ್ಷಾರ್ಹ ಅಪರಾಧವೆಸಗಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಕಂಡುಬರುತ್ತದೆ. ಈ ಹಿನ್ನಲೆಯಲ್ಲಿ ಆಪಾದಿತ ಅಧಿಕಾರಿ, ಶ್ರೀ ಕೆ.ಪಿ. ಹೊನಕೇರಿ, ಕೆ.ಎ.ಎಸ್. ಇವರು ತಮ್ಮ ಸ್ಥಾನದಲ್ಲಿಯೇ ಮುಂದುವರೆದರೆ ತಮ್ಮ ಪ್ರಭಾವವನ್ನು ಬೀರುವುದರ ಮೂಲಕ ಸಾಕ್ಷಾಧಾರಗಳನ್ನು ನಾಶಪಡಿಸಿ ತನಿಖೆಗೆ ಅಡ್ಡಿ ಅಡಚಣೆ ಉಂಟು ಮಾಡುವ ಸಾಧ್ಯತೆಗಳಿರುವುದರಿಂದ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಿ ಅವರ ಸ್ಥಾನವನ್ನು ಪಲ್ಲಟಗೊಳಿಸಲು ಮೇಲೆ ಓದಲಾದ (1)ರ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ಕರ್ನಾಟಕ ಲೋಕಾಯುಕ್ತರ ಅಪರ ಪೊಲೀಸ್ ಮಹಾನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಶ್ರೀ ಕೆ.ಪಿ. ಹೊನಕೇರಿ, ಕೆ.ಎ.ಎಸ್. ಇವರನ್ನು ದಿ: 31–3–08ರ ಅಧಿಸೂಚನೆಯಲ್ಲಿ ಉಡುಪಿ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರನ್ನಾಗಿ ನೇಮಿಸಿ ವರ್ಗಾಯಿಸಲಾಗಿದೆ. ಕರ್ನಾಟಕ ಲೋಕಾಯುಕ್ತರ ಅಪರ ಪೊಲೀಸ್ ಮಹಾನಿರ್ದೇಶಕರು ವರದಿ ಮಾಡಿರುವ ಹಿನ್ನಲೆಯಲ್ಲಿ ಆಪಾದಿತ ಅಧಿಕಾರಿಯು ತಮ್ಮ ಬಲ್ಲ ಮೂಲಗಳಿಗಿಂತ ಅಪಾರ ಪ್ರಮಾಣದ ಅಧಿಕ ಆಸ್ತಿಯನ್ನು ಹೊಂದಿದ್ದಾರೆಂದು ಹಾಗೂ ಆಪಾದಿತರ ಭ್ರಷ್ಟಾಚಾರವು ಮೇಲ್ನೋಟಕ್ಕೆ ಸಾಬೀತು ಪಡುವುದರಿಂದಲೂ ಪ್ರಕರಣದ ಸುಗಮ ತನಿಖೆಗೆ ಅವಕಾಶ ಕಲ್ಪಿಸುವ ಅವಶ್ಯಕತೆಯನ್ನು ಮನಗಂಡು ಸರ್ಕಾರವು ಶ್ರೀ ಕೆ.ಪಿ. ಹೊನಕೇರಿ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಅವರನ್ನು ಮುಂದಿನ ತನಿಖೆ/ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತಿನಲ್ಲಿರಿಸಲು ನಿರ್ಣಯಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 36 ಕೆಇವಿ 2008, ಬೆಂಗಳೂರು, ದಿನಾಂಕ: 10ನೇ ಡಿಸೆಂಬರ್ 2008.**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(2)(ಎ)ರ ಪ್ರಕಾರ ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(1)(aa) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕೆ.ಪಿ. ಹೊನಕೇರಿ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ, ಹಾಲಿ ಪ್ರಾಂಶುಪಾಲರು, ಜಿಲ್ಲಾ ತರಬೇತಿ ಸಂಸ್ಥೆ, ಚಿಕ್ಕಮಗಳೂರು ಇವರ ವಿರುದ್ಧ ಶಿಸ್ತು ಕ್ರಮ ವಿಚಾರಣೆಯನ್ನು ಕಾಯ್ದಿಟ್ಟು ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಕೆ.ಪಿ. ಹೊನಕೇರಿ, ಕೆ.ಎ.ಎಸ್. ಅಧಿಕಾರಿ ರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 98ರ ನಿಯಮದನ್ವಯ ಜೀವನಾಧಾರದ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಕೆ.ಪಿ. ಹೊನಕೇರಿ, ಕೆ.ಎ.ಎಸ್. ರವರು ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.16

**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು–2)

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಅಪಜೀ 116 ಎಫ್‌ಡಬ್ಲ್ಯೂಎಲ್ 2008, ಬೆಂಗಳೂರು, ದಿನಾಂಕ 26ನೇ ನವೆಂಬರ್ 2008**

**ವಿಷಯ :** ರಕ್ಷಿತ ಪ್ರದೇಶಗಳ ನಿರ್ವಹಣಾ ನಿಧಿ (Protected Area Management Fund) ಸ್ಥಾಪನೆ ಹಾಗೂ ನಿಧಿಯ ನಿರ್ವಹಣಾ ಸಮಿತಿಯ ರಚನೆ ಬಗ್ಗೆ–ತಿದ್ದುಪಡಿ

ಸರ್ಕಾರದ ಆದೇಶ ಸಂಖ್ಯೆ: ಅಪಜೀ 158 ಎಫ್‌ಡಬ್ಲ್ಯೂಎಲ್ 1999 ದಿನಾಂಕ 31–1–2001ರ ಆದೇಶ ಭಾಗದ ಸದಸ್ಯರುಗಳ ಕ್ರಮ ಸಂಖ್ಯೆ (1)ರಲ್ಲಿರುವ "ಮುಖ್ಯ ಅರಣ್ಯ ಜೀವಿ ಪರಿಪಾಲಕರು" ಎಂಬುದರ ಬದಲಾಗಿ "ಮುಖ್ಯ ವನ್ಯಜೀವಿ ಪರಿಪಾಲಕರರು" ಎಂಬುದಾಗಿಯೂ ಮತ್ತು ಸದರಿ ಆದೇಶದ ಕ್ರಮ ಸಂಖ್ಯೆ (2)ರಲ್ಲಿ "ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ರಕ್ಷಣೆ ಮತ್ತು ನಿರ್ವಹಣೆ)" ಎಂಬುದರ ಬದಲಾಗಿ "ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ಅರಣ್ಯ ಸಂಪನ್ಮೂಲ ನಿರ್ವಹಣೆ)" ಎಂದು ಓದಿಕೊಳ್ಳತಕ್ಕದ್ದು ಹಾಗೂ ಕ್ರಮ ಸಂಖ್ಯೆ (8)ರಲ್ಲಿನ "ನಿರ್ದೇಶಕರು ಮತ್ತು ಅರಣ್ಯ ಸಂರಕ್ಷಣಾಧಿಕಾರಿ, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ" ಎಂಬುದರ ಬದಲಾಗಿ "ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ), ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಇವರ ಕಛೇರಿ" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.22

**ಹೆಚ್.ಎಂ. ಮಲ್ಲಿಕಾರ್ಜುನಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

**ಆರ್ಥಿಕ ಸಚಿವಾಲಯ**

**ವಿಷಯ :** ಗುಂಡು ನಿರೋಧಕ ಕಾರು ಮತ್ತು ಜಾಮರ್ ವಾಹನಗಳನ್ನು ದುರಸ್ತಿಗೊಳಿಸಲು ವಿನಾಯಿತಿ ನೀಡುವ ಬಗ್ಗೆ.

**ಉಲ್ಲೇಖ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಆಇ 10 ಟಿ.ಸಿ.ಇ. 93, ದಿನಾಂಕ 21–9–1995.

2. ಡೈರೆಕ್ಟರ್ ಜನರಲ್ ಮತ್ತು ಪೊಲೀಸ್ ಇನ್‌ಸ್ಪೆಕ್ಟರ್ ಜನರಲ್ ರವರ ಪತ್ರ ಸಂಖ್ಯೆ: ವಾಸಾ (2)2: 2008–09, ದಿನಾಂಕ 25–4–2008.

**ಪ್ರಸ್ತಾವನೆ :**

ಪೊಲೀಸ್ ಇಲಾಖೆಯಲ್ಲಿ ಅತಿ ಗಣ್ಯ ವ್ಯಕ್ತಿಗಳ ಭದ್ರತೆಗೆ ಗುಂಡು ನಿರೋಧಕ ಕಾರುಗಳು / ಜಾಮರ್ ವಾಹನಗಳನ್ನು ಒದಗಿಸಲಾಗಿದೆ. ಈ ವಾಹನಗಳನ್ನು ಗಣ್ಯ ಮತ್ತು ಅತಿ ಗಣ್ಯ ವ್ಯಕ್ತಿಗಳ ಭದ್ರತಾ ಕರ್ತವ್ಯಕ್ಕೆ ರಾಜ್ಯದ ಎಲ್ಲಾ ಕಡೆ ಕಾರ್ಯ ನಿರ್ವಹಿಸಲು ಉಪಯೋಗಿಸಲಾಗುತ್ತಿದೆ. ಇದಕ್ಕಾಗಿ ಸಾಮಾನ್ಯ ಅಂಬಾಸಿಡಾರ್ ಕಾರನ್ನು ಹೈದರಾಬಾದ್ (ಮೆಡಕ್) ನಲ್ಲಿ ಬಿ.ಪಿ. ವಾಹನಗಳನ್ನಾಗಿ ಪರಿವರ್ತಿಸಲಾಗಿದೆ. ಇದು ಸಾಮಾನ್ಯ ಕಾರ್‌ಗಿಂತಲು ಸುಮಾರು 1000 ಕೆ.ಜಿ. ಹೆಚ್ಚು ಭಾರ ಹೊಂದಿರುತ್ತದೆ. ಈ ವಾಹನಗಳ ತೂಕ ಹೆಚ್ಚಾಗಿರುವುದರಿಂದ ಸಾಮಾನ್ಯ ವಾಹನಕ್ಕಿಂತ ಇದರ ಸವೆತ ಶೀಘ್ರವಾಗಿ ಆಗುವುದರಿಂದ (Wear & Tear) ದುರಸ್ತಿ ಕಾರ್ಯ ಹೆಚ್ಚಾಗಿರುತ್ತದೆ.

2. ಈ ವಾಹನಗಳಿಗೆ ದುರಸ್ತಿ ಮಾಡಿಸಬೇಕಾದರೆ ಉಲ್ಲೇಖಿತ (1)ರ ಸರ್ಕಾರದ ಅಧಿಸೂಚನೆಯಲ್ಲಿ ಸೂಚಿಸಿರುವಂತೆ ಸಾದಿಲ್ವಾರು ವೆಚ್ಚ ಕೈಪಿಡಿಯ ನಿಯಮ 55(40)ರ ಪ್ರಕಾರ ಹಿಂದಿನ ಸಣ್ಣ ಪ್ರಮಾಣದ ಪೂರ್ಣ ದುರಸ್ತಿ (Minor Overhaul) ನಂತರ ಪುನಃ ದುರಸ್ತಿ ಮಾಡಿಸಲು ವಾಹನವು ಚಲಿಸಬೇಕಾದ ನಿಗದಿತ ಕಿಲೋಮೀಟರ್‌ನಲ್ಲಿ ಇಲಾಖಾ ಮುಖ್ಯಸ್ಥರಿಗೆ ಶೇಕಡ 50ರಷ್ಟು ಸಡಿಲಿಕೆಯನ್ನು ಮಾಡಲು ಅವಕಾಶವಿರುತ್ತದೆ. ಆದರೆ ಗುಂಡುನಿರೋಧಕ ಕಾರು/ಜಾಮರ್ ವಾಹನಗಳ ದುರಸ್ತಿ ಬಗ್ಗೆ ಪ್ರತ್ಯೇಕವಾಗಿ ಆದೇಶವಿರುವುದಿಲ್ಲ.

3. ಈ ಮೇಲಿನ ಎಲ್ಲಾ ಪ್ರಮುಖ ಅಂಶಗಳನ್ನು ಪರಿಗಣಿಸಿ ಪೊಲೀಸ್ ಇಲಾಖೆಯ ಗುಂಡುನಿರೋಧಕ ಕಾರು ಹಾಗೂ ಜಾಮರ್ ವಾಹನಗಳನ್ನು ದುರಸ್ತಿಗೊಳಿಸಲು ಸರ್ಕಾರದ ಅಧಿಸೂಚನೆ ಸಂಖ್ಯೆ: ಆಇ 10 ಟಿಸಿಇ 93 ದಿನಾಂಕ 21–9–95ರ ಆದೇಶದಲ್ಲಿನ ನಿಬಂಧನೆಗಳನ್ನು ಸಡಿಲಿಸಿ ಮಾರ್ಪಡಿಸಲು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಡೈರೆಕ್ಟರ್ ಜನರಲ್ ಮತ್ತು ಪೊಲೀಸ್ ಇನ್‌ಸ್ಪೆಕ್ಟರ್ ಜನರಲ್ ರವರು ಸರ್ಕಾರವನ್ನು ಕೋರಿರುತ್ತಾರೆ.

4. ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 1 ಟಿಸಿಇ 2008, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2008.**

ಪೊಲೀಸ್ ಇಲಾಖೆಗೆ ಸಂಬಂಧಿಸಿದ ಗುಂಡು ನಿರೋಧಕ ಕಾರು ಮತ್ತು ಜಾಮರ್ ವಾಹನಗಳನ್ನು ದುರಸ್ತಿಗೊಳಿಸಲು ಮಾತ್ರ ವಿಶೇಷ ಪ್ರಕರಣವೆಂದು ಪರಿಗಣಿಸಿ ಸಾದಿಲ್ವಾರು ವೆಚ್ಚ ಕೈಪಿಡಿಯ ನಿಯಮ 55 (40)ನ್ನು ಸಡಿಲಿಸಿ ಇಲಾಖಾ ಮುಖ್ಯಸ್ಥರಿಗೆ ಈ ಕೆಳಕಂಡಂತೆ ಅಧಿಕಾರ ನೀಡಲಾಗಿದೆ.

i) ವಾಹನಗಳ ದೊಡ್ಡ ಪ್ರಮಾಣದ ಪೂರ್ಣ ದುರಸ್ತಿಗಳು (Mijor Overhauls) ಚಲಿಸಬೇಕಾದ ನಿಗದಿತ ಕಿಲೋಮೀಟರ್‌ನ್ನು 20,000 ಕಿ.ಮಿ.ಗೆ ಮಿತಿಗೊಳಿಸಲಾಗಿದೆ. ಈ ಮಿತಿಯನ್ನು ಮೀರಿದಲ್ಲಿ ಅಂತಹ ಪ್ರಕರಣಗಳನ್ನು ಅನುಮೋದಿಸಲು ಡೈರೆಕ್ಟರ್ ಜನರಲ್ ಮತ್ತು ಪೊಲೀಸ್ ಇನ್‌ಸ್ಪೆಕ್ಟರ್ ಜನರಲ್‌ರವರಿಗೆ ಅಧಿಕಾರ ನೀಡಲಾಗಿದೆ.

ii) ವಾಹನಗಳ ಸಣ್ಣ ಪ್ರಮಾಣದ ಪೂರ್ಣ ದುರಸ್ತಿಗಳು (Minor Overhauls) ಚಲಿಸಬೇಕಾದ ನಿಗದಿತ ಕಿಲೋಮೀಟರ್‌ನ ಮಿತಿಯಿಂದ ವಿನಾಯಿತಿ ನೀಡಲಾಗಿದೆ.

iii) ಟೈರುಗಳು ಮತ್ತು ಟ್ಯೂಬುಗಳನ್ನು ನವೀಕರಿಸುವುದು ಮತ್ತು ಟೈರುಗಳ ರಿಟ್ರೇಡಿಂಗ್ – ಚಲಿಸಬೇಕಾದ ನಿಗದಿತ ಕಿಲೋಮೀಟರ್‌ನ್ನು 20,000 ಕಿ.ಮಿ.ಗೆ ಮಿತಿಗೊಳಿಸಲಾಗಿದೆ. ಈ ಮಿತಿಯನ್ನು ಮೀರಿದಲ್ಲಿ ಅಂತಹ ಪ್ರಕರಣಗಳನ್ನು ಅನುಮೋದಿಸಲು ಡೈರೆಕ್ಟರ್ ಜನರಲ್ ಮತ್ತು ಪೊಲೀಸ್ ಇನ್‌ಸ್ಪೆಕ್ಟರ್ ಜನರಲ್‌ರವರಿಗೆ ಅಧಿಕಾರ ನೀಡಲಾಗಿದೆ.

2. ಮೇಲಿನ ದುರಸ್ತಿಗೆ ಸಂಬಂಧಿಸಿದ ಎಲ್ಲಾ ವೆಚ್ಚಗಳನ್ನು ವಾಹನದುರಸ್ತಿಗೆ ನಿಗದಿಪಡಿಸಿರುವ ಆಯವ್ಯಯದಲ್ಲಿ ಭರಿಸತಕ್ಕದ್ದು.

ಈ ಬಗ್ಗೆ ಸಾದಿಲ್ವಾರು ವೆಚ್ಚದ ಕೈಪಿಡಿ ನಿಯಮ 55 (40) ಕ್ಕೆ ಸೂಕ್ತ ತಿದ್ದುಪಡಿಯನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.34

**ಸಿ. ಶಾಮರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

(ಆರ್ಥಿಕ ನಿಯಮಗಳು, ಆಯವ್ಯಯ ಸಂಕಲನ ಮತ್ತು ಸಮಿತಿ ಶಾಖೆ)

ಆರ್ಥಿಕ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಮೈಸೂರು ಸಕ್ಕರೆ ಕಾರ್ಖಾನೆ (ನಿ) ಮಂಡ್ಯ ಈ ಕಾರ್ಖಾನೆಯ ವ್ಯಾಪ್ತಿಯಲ್ಲಿ 2008–09ನೇ ಸಾಲಿನಲ್ಲಿ ಬೆಳೆಯಲಾಗಿರುವ ನೋಂದಾಯಿತವಲ್ಲದ ಹೆಚ್ಚುವರಿ ಕಬ್ಬನ್ನು ಪಾಂಡವಪುರ ಸಹಕಾರ ಸಕ್ಕರೆ ಕಾರ್ಖಾನೆ (ನಿ) ಪಾಂಡವಪುರ ರವರು ತಾತ್ಕಾಲಿಕವಾಗಿ ಸಾಗಾಣಿಕೆ ಮಾಡಿಕೊಳ್ಳಲು ಹಂಚಿಕೆ ಮಾಡಲಾದ ಆದೇಶವನ್ನು ಹಿಂದಕ್ಕೆ ಪಡೆಯುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ: ಸಿಐ 156 ಎಸ್‌ಜಿಎಫ್ 2008, ದಿ: 21–8–2008.
2. ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ ಇದರ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂ: ಎಂಎಸ್‌ಕೊ/08/ಎಂಡಿ–ಕೇನ್/291, ದಿನಾಂಕ 30–10–2008.
3. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಡಿಇವಿ/12/ 2007–08, ದಿ: 31–10–2008.

**ಪ್ರಸ್ತಾವನೆ :**

ಮೇಲೆ ಓದಲಾದ ಉಲ್ಲೇಖ (1)ರಲ್ಲಿರುವ ಸರ್ಕಾರದ ಆದೇಶದಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ ವ್ಯಾಪ್ತಿಯ 50 ಗ್ರಾಮಗಳಲ್ಲಿ ಲಭ್ಯವಿರುವ ನೋಂದಾಯಿತವಲ್ಲದ ಹೆಚ್ಚುವರಿ ಕಬ್ಬಿನಲ್ಲಿ 1.50 ಲಕ್ಷ ಟನ್ ಕಬ್ಬನ್ನು ಮಾತ್ರ ಮೆ: ಪಾಂಡವಪುರ ಸಹಕಾರ ಸಕ್ಕರೆ ಕಾರ್ಖಾನೆಗೆ ತಾತ್ಕಾಲಿಕವಾಗಿ ಸರಬರಾಜು ಮಾಡಿಕೊಂಡು ನುರಿಸಲು ಸರ್ಕಾರದ ಅನುಮೋದನೆಯನ್ನು ಕೆಲವು ಷರತ್ತುಗಳೊಂದಿಗೆ ನೀಡಲಾಗಿದೆ.

ಮೇಲೆ ಓದಲಾದ (2)ರಲ್ಲಿರುವ ದಿನಾಂಕ 30–10–2008ರ ಪತ್ರದಲ್ಲಿ ಮೈಸೂರು ಸಕ್ಕರೆ ಕಾರ್ಖಾನೆಯ ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಸಕ್ಕರೆ ಕಾರ್ಖಾನೆಗೆ ಪ್ರತಿದಿನ 2000 ರಿಂದ 2500 ಟನ್ ಕಬ್ಬಿನ ಅವಶ್ಯಕತೆ ಇದ್ದು ಕಾರ್ಖಾನೆಗೆ ನಿಗಧಿತ ಪ್ರಮಾಣದಲ್ಲಿ ಕಬ್ಬು ಸರಬರಾಜಾಗುತ್ತಿಲ್ಲವೆಂದು, ಸಾಕಷ್ಟು ಕಬ್ಬು ದೊರೆಯದೆ, ಕಾರ್ಖಾನೆ ವ್ಯಾಪ್ತಿಯಲ್ಲಿನ ಕಬ್ಬು ಇತರೇ ಕಾರ್ಖಾನೆಗಳಿಗೆ ಮಾರ್ಗಪಲ್ಲಟವಾಗುತ್ತಿರುವುದಾಗಿ ತಿಳಿಸುತ್ತಾ, ಪಾಂಡವಪುರ ಸಹಕಾರ ಸಕ್ಕರೆ ಕಾರ್ಖಾನೆಯು ನಿಗಧಿಪಡಿಸಿದ 50 ಗ್ರಾಮಗಳಲ್ಲದೆ ಸಮೀಪದ ಬೇರೆ ಬೇರೆ ಗ್ರಾಮಗಳಿಂದಲೂ ಒಪ್ಪಿಗೆ/ಒಪ್ಪಿಗೆರಹಿತ ಕಬ್ಬನ್ನು ಸರಬರಾಜು ಮಾಡಿಕೊಳ್ಳುತ್ತಿದ್ದು ಸರ್ಕಾರದ ಆದೇಶವನ್ನು ಸದರಿ ಕಾರ್ಖಾನೆಯವರು ಉಲ್ಲಂಘಿಸಿದ್ದಾರೆಂದು ಸಹ ತಿಳಿಸಿ, ಮೈಸೂರು ಸಕ್ಕರೆ ಕಾರ್ಖಾನೆಗೆ ಹೆಚ್ಚುವರಿ ಕಬ್ಬು ಬೇಕಾಗಿರುವ ಹಿನ್ನೆಲೆಯಲ್ಲಿ, ಮೈಸೂರು ಸಕ್ಕರೆ ಕಾರ್ಖಾನೆ ವ್ಯಾಪ್ತಿಯಲ್ಲಿನ 50 ಹಳ್ಳಿಗಳಲ್ಲಿನ 1.50 ಲಕ್ಷ ಮೆ.ಟನ್ ನೋಂದಾಯಿತವಲ್ಲದ ಕಬ್ಬನ್ನು ತಾತ್ಕಾಲಿಕವಾಗಿ ಸಾಗಾಣೆ ಮಾಡಿಕೊಳ್ಳಲು ಮೆ: ಪಾಂಡವಪುರ ಸಹಕಾರ ಸಕ್ಕರೆ ಕಾರ್ಖಾನೆಗೆ ಹಂಚಿಕೆ ಮಾಡಿರುವ ದಿನಾಂಕ 21–8–2008ರ ಆದೇಶವನ್ನು ಹಿಂದಕ್ಕೆ ಪಡೆದುಕೊಳ್ಳುವಂತೆ ಕೋರಿರುತ್ತಾರೆ.

ಮುಂದುವರಿದು, ಕಬ್ಬು ಅಭಿವೃದ್ಧಿ ಆಯುಕ್ತರು ಹಾಗೂ ಸಕ್ಕರೆ ನಿರ್ದೇಶಕರುರವರು ಸಹ ಮೇಲೆ ಓದಲಾದ (3)ರಲ್ಲಿರುವ ದಿನಾಂಕ 31–10–2008ರ ಪತ್ರದಲ್ಲಿ ಮೈಸೂರು ಸಕ್ಕರೆ ಕಾರ್ಖಾನೆಯು 2008–09ನೇ ಸಾಲಿನಲ್ಲಿ ಕಬ್ಬು ಅರೆಯುವ ಕಾರ್ಯವನ್ನು ಪ್ರಾರಂಭ ಮಾಡಿರುವುದರಿಂದ ಕಾರ್ಖಾನೆಗೆ ಕಬ್ಬಿನ ಕೊರತೆಯಾಗಿರುವುದರಿಂದ ಪಾಂಡವಪುರ ಸಹಕಾರ ಸಕ್ಕರೆ ಕಾರ್ಖಾನೆಗೆ ಮೈಸೂರು ಸಕ್ಕರೆ ಕಾರ್ಖಾನೆ ವ್ಯಾಪ್ತಿಯಲ್ಲಿನ 50 ಹಳ್ಳಿಗಳಲ್ಲಿನ 1.50 ಲಕ್ಷ ಟನ್ ನೋಂದಾಯಿತವಲ್ಲದ ಕಬ್ಬನ್ನು ಸಾಗಾಣಿಕೆ ಮಾಡಿಕೊಳ್ಳಲು ಹಂಚಿಕೆ ಮಾಡಿ ಹೊರಡಿಸಿರುವ ದಿನಾಂಕ 21–8–2008ರ ಆದೇಶವನ್ನು ಹಿಂದಕ್ಕೆ ಪಡೆಯುವಂತೆ ಶಿಫಾರಸ್ಸು ಮಾಡಿರುತ್ತಾರೆ.

ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಸಕ್ಕರೆ ಕಾರ್ಖಾನೆ (ನಿ) ಹಾಗೂ ಕಬ್ಬು ಅಭಿವೃದ್ಧಿ ಆಯುಕ್ತರರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 220 ಎಸ್‌ಜಿಎಫ್ 2008 ಬೆಂಗಳೂರು, ದಿನಾಂಕ: 27ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ ವ್ಯಾಪ್ತಿಯ 50 ಗ್ರಾಮಗಳಲ್ಲಿನ 1.50 ಲಕ್ಷ ಟನ್ ನೋಂದಾಯಿತವಲ್ಲದ ಕಬ್ಬನ್ನು ಮೆ: ಪಾಂಡವಪುರ ಸಹಕಾರ ಸಕ್ಕರೆ ಕಾರ್ಖಾನೆಗೆ ತಾತ್ಕಾಲಿಕವಾಗಿ ಸಾಗಾಣಿಕೆ ಮಾಡಿಕೊಳ್ಳಲು ಹೊರಡಿಸಲಾಗಿದ್ದ ಸರ್ಕಾರದ ಆದೇಶ ಸಂಖ್ಯೆ: ಸಿಐ 156 ಎಸ್‌ಜಿಎಫ್ 2008, ದಿ: 21–8–2008ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂದಕ್ಕೆ ಪಡೆಯಲಾಗಿದ್ದು ಮೆ: ಪಾಂಡವಪುರ ಸಹಕಾರ ಸಕ್ಕರೆ ಕಾರ್ಖಾನೆಯು ಈ ಆದೇಶ ಹೊರಡಿಸಿದ ದಿನಾಂಕದಿಂದಲೇ ಈ 50 ಹಳ್ಳಿಗಳಿಂದ ಕಬ್ಬು ಸರಬರಾಜು ಮಾಡಿಕೊಳ್ಳುವುದನ್ನು ನಿಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.38

**ಪಿ. ಆನಂದಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಹೆಚ್.ಪಿ. ಹಬೀಬುಲ್ಲಾ ಬೇಗ್, ವಾಣಿಜ್ಯ ತೆರಿಗೆ ಅಧಿಕಾರಿ, (ಗುಪ್ತವಾರ್ತೆ), ಚಿಕ್ಕಮಗಳೂರು, ಇವರ ವಿರುದ್ಧದ ಅಭಿಯೋಜನಾ ಆದೇಶದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ–1/ಸಿಆರ್–1/2008, ಚಿಕ್ಕಮಗಳೂರು, ದಿನಾಂಕ 10–10–2008.
2. ಸರ್ಕಾರಿ ಆದೇಶ ಸಂಖ್ಯೆ: ಆಇ 4 ವಾತೆತ 2008, ದಿನಾಂಕ 3–3–2008.
3. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ–1/ಸಿಆರ್–1/2008, ಚಿಕ್ಕಮಗಳೂರು, ದಿನಾಂಕ 4–10–2008.

**ಪ್ರಸ್ತಾವನೆ :**

ಶ್ರೀ ಹೆಚ್.ಪಿ. ಹಬೀಬುಲ್ಲಾ ಬೇಗ್, ವಾಣಿಜ್ಯ ತೆರಿಗೆ ಅಧಿಕಾರಿ, (ಗುಪ್ತವಾರ್ತೆ), ಚಿಕ್ಕಮಗಳೂರು, ಈ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಈ ಅಧಿಕಾರಿಯವರ ವಿರುದ್ಧ ಶ್ರೀ ಎ.ವಿ. ಸುರೇಶ್ ಬಿನ್ ವೆಂಕಟಾಚಲಪತಿ, ಮಾಲೀಕರು, ಇವರು ಚಿಕ್ಕಮಗಳೂರು ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ದೂರು ಸಲ್ಲಿಸಿ, ಸದರಿಯವರು ಚಿಕ್ಕಮಗಳೂರಿನ ನಾಯ್ಡು ರಸ್ತೆಯಲ್ಲಿರುವ ಕನ್ನಿಕಾ ಪ್ಲಾಸ್ಟಿಕ್ ಅಂಗಡಿಯನ್ನಿಟ್ಟುಕೊಂಡು ಜೀವನ ಮಾಡುತ್ತಿದ್ದು, ಆರೋಪಿತ ಅಧಿಕಾರಿಯಾದ ಶ್ರೀ ಹಬೀಬುಲ್ಲಾ ಬೇಗ್, ವಾಣಿಜ್ಯ ತೆರಿಗೆ ಅಧಿಕಾರಿ (ಗುಪ್ತವಾರ್ತೆ), ಚಿಕ್ಕಮಗಳೂರು ಇವರು ಫಿರ್ಯಾದುದಾರರ ಅಂಗಡಿಗೆ ಭೇಟಿ ನೀಡಿ, ಸದರಿ ಅಂಗಡಿ ತಪಾಸಣೆ ಮಾಡದಿರಲು ರೂ. 15,000/–ಗಳ ಅಕ್ರಮ ಸಂಭಾವನೆಯನ್ನು ಕೊಡುವಂತೆಯೂ, ಇಲ್ಲದಿದ್ದರೆ ದಂಡ ಹಾಕುವುದಾಗಿಯೂ ತಿಳಿಸಿ, ಅಕ್ರಮ ಸಂಭಾವನೆಗೆ ಒತ್ತಾಯಿಸಿರುತ್ತಾರೆ. ಫಿರ್ಯಾದುದಾರರಿಗೆ ಅಕ್ರಮ ಸಂಭಾವನೆಯನ್ನು ಕೊಡಲು ಇಷ್ಟವಿಲ್ಲದಿದ್ದ ಕಾರಣ ಚಿಕ್ಕಮಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆಗೆ ದೂರು ಸಲ್ಲಿಸಿದರು. ಆಪಾದಿತ ಅಧಿಕಾರಿಯ ವಿರುದ್ಧ ಮೊಕದ್ದಮೆ ಸಂಖ್ಯೆ: 1/2008 ದಿನಾಂಕ 7–1–2008ರಲ್ಲಿ ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ) ಸಹವಾಚನ ಕಲಂ 13(2)ರ ಪ್ರಕಾರ ಈ ಪ್ರಕರಣವನ್ನು ದಾಖಲಿಸಿಕೊಂಡ ಲೋಕಾಯುಕ್ತದ ಪೊಲೀಸ್ ಅಧಿಕಾರಿಗಳು ತನಿಖೆ ಕೈಗೊಂಡಿರುತ್ತಾರೆ. ತನಿಖಾಧಿಕಾರಿಯವರು ತಮ್ಮ ಸಿಬ್ಬಂದಿ ಮತ್ತು ಪಂಚ ಸಾಕ್ಷಿಗಳ ಸಮೇತ ದಿನಾಂಕ 8–1–2008 ರಂದು ಆಪಾದಿತ ಅಧಿಕಾರಿಯವರ ವಿರುದ್ಧ ಬೀಸಿದ ಬಲೆಯು ಯಶಸ್ವಿಯಾಗಿದ್ದು, ಟ್ರ್ಯಾಪ್ ಸಮಯದಲ್ಲಿ ಆರೋಪಿತ ಅಧಿಕಾರಿ ಶ್ರೀ ಹಬೀಬುಲ್ಲಾ ಬೇಗ್, ವಾ.ತೆ.ಅ., ಇವರು ಫಿರ್ಯಾದುದಾರರಿಂದ ಒತ್ತಾಯ ಮಾಡಿದ್ದ ಅಕ್ರಮ ಸಂಭಾವನೆ ರೂ. 15,000/–ಗಳನ್ನು ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತ ಪೊಲೀಸರಿಗೆ ನೇರವಾಗಿ ಸಿಕ್ಕಿಬಿದ್ದಿರುತ್ತಾರೆ. ಇವರ ಎರಡೂ ಕೈ ಬೆರಳುಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಲಾಗಿ, ದ್ರಾವಣವು ತಿಳಿ ಗುಲಾಬಿ ಬಣ್ಣಕ್ಕೆ ತಿರುಗುವುದರ ಮೂಲಕ ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿರುವುದಾಗಿ ತಿಳಿಸಿದ್ದಾರೆ. ಈ ರೀತಿ ಆರೋಪಿತರ ವಿರುದ್ಧದ

ಭ್ರಷ್ಟಾಚಾರಗಳ ಆರೋಪಣೆಗಳು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಅದೇ ದಿನ ಅಂದರೆ ದಿನಾಂಕ 8–1–2008 ರಂದು ಇವರನ್ನು ದಸ್ತಗಿರಿ ಮಾಡಿರುತ್ತಾರೆ. ಈ ರೀತಿ ಆರೋಪಿತ ಅಧಿಕಾರಿಯವರು ಅಕ್ರಮ ಸಂಭಾವನೆ ಪಡೆದಿರುವುದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಅವರು ಅದೇ ಸ್ಥಾನದಲ್ಲಿ ಮುಂದುವರೆದರೆ ಆರೋಪಿತರು ತನಿಖೆಯ ಹಾದಿಯನ್ನು ತಪ್ಪಿಸುವ ಹಾಗೂ ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಸಾಧ್ಯತೆಗಳಿರುವುದರಿಂದ ಇವರನ್ನು ಕೂಡಲೇ ಅಮಾನತ್ತಿನಲ್ಲಿಟ್ಟು ಇವರ ಲೀನನ್ನು ಬೇರೆಡೆಗೆ ವರ್ಗಾಯಿಸುವಂತೆ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಶಿಫಾರಸ್ಸು ಮಾಡಿದ್ದರು. ಲೋಕಾಯುಕ್ತ ಪೊಲೀಸರ ಶಿಫಾರಸ್ಸಿನ ಮೇರೆಗೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರಿ ಆದೇಶ ದಿನಾಂಕ 3–3–2008ರಲ್ಲಿ ಸದರಿ ಅಧಿಕಾರಿಯನ್ನು ಅಮಾನತ್ತಿನಲ್ಲಿಡಲಾಗಿರುತ್ತದೆ.

ಶ್ರೀ ಹೆಚ್.ಪಿ. ಹಬೀಬುಲ್ಲಾ ಬೇಗ್, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಪ್ರಕರಣದ ತನಿಖೆಯನ್ನು ಪೂರ್ಣಗೊಳಿಸಿರುವ ತನಿಖಾಧಿಕಾರಿಯ ಅಂತಿಮ ವರದಿಯ ಪ್ರಕಾರ ಆರೋಪಿತ ಸರ್ಕಾರಿ ಅಧಿಕಾರಿ ಶ್ರೀ ಹೆಚ್.ಪಿ. ಹಬೀಬುಲ್ಲಾ ಬೇಗ್, ಇವರ ವಿರುದ್ಧ ದಾಖಲಾಗಿರುವ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಗೆ 13(2) ರಡಿಯಲ್ಲಿನ ಆಪಾದನೆಗಳು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಆದ್ದರಿಂದ ಸದರಿ ಆರೋಪಿತರು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಅರ್ಹರಿರುತ್ತಾರೆ. ಆದುದರಿಂದ ಸದರಿ ಅಧಿಕಾರಿಯನ್ನು ಅವರು ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1) ರನ್ವಯ ಮಂಜೂರಾತಿ ನೀಡುವಂತೆ ಮೇಲೆ ಓದಲಾಗಿರುವ ಕ್ರಮ ಸಂಖ್ಯೆ: 3ರ ಪತ್ರದಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಸರ್ಕಾರವನ್ನು ಕೋರಿರುತ್ತಾರೆ.

ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 4 ವಾತೆತ 2008, ಬೆಂಗಳೂರು, ದಿನಾಂಕ: 22ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಲಂಚ ನಿರೋಧಕ ಕಾಯ್ದೆ 1988ರ 19(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಆಪಾದಿತ ಅಧಿಕಾರಿಯಾದ ಶ್ರೀ ಹೆಚ್.ಪಿ. ಹಬೀಬುಲ್ಲಾ ಬೇಗ್, ವಾಣಿಜ್ಯ ತೆರಿಗೆ ಅಧಿಕಾರಿ (ಅಮಾನತ್ತಿನಲ್ಲಿ), ಇವರನ್ನು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ಮೇಲ್ಕಂಡ ನಿಯಮಗಳನ್ವಯ ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ 22–11–2008ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.36

**ಮಹಬೂಬ್ ಖಾನ್**

ಪೀಠಾಧಿಕಾರಿ,

ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2)

## ಕಂದಾಯ ಸಚಿವಾಲಯ

**ವಿಷಯ :** ಶ್ರೀಮತಿ ಎಸ್.ಎ. ಸುಧಾ, ಸಹಾಯಕ ಪ್ರಾಧ್ಯಾಪಕರು, ಜೈನಾಗಮ ವಿಭಾಗ, ಸರ್ಕಾರಿ ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು ಇವರಿಗೆ 20 ವರ್ಷಗಳ ಸೇವೆಗಾಗಿ ಒಂದು ಹೆಚ್ಚುವರಿ ವೇತನ ಬಡ್ತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ. ಕಂಇ 49 ಮುಸೇವಿ 1997, ದಿ: 6–6–1997.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 281 ಮುಸೇವಿ 2003, ದಿನಾಂಕ 13–5–2005.
3. ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂ: ಸಿಬ್ಬಂದಿ.2.ಸಿಆರ್.71/2006–07, ದಿನಾಂಕ 19–10–2006.

**ಪ್ರಸ್ತಾವನೆ :**

ಶ್ರೀಮತಿ ಎಸ್.ಎ. ಸುಧಾ, ಜೈನಾಗಮ ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಸಂಸ್ಕೃತ ಕಾಲೇಜು, ಮೈಸೂರುರವರು ದಿನಾಂಕ 30–8–1986ರಂದು ಜೈನಾಗಮ ಸಹಾಯಕ ಪ್ರಾದ್ಯಾಪಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಸದರಿಯವರು ದಿನಾಂಕ 31–8–1996ಕ್ಕೆ 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿದ್ದು, "Karnataka Civil Services (Time Bound Advancement) Rules, 1983" ರನ್ವಯ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಸದರಿಯವರಿಗೆ 10 ವರ್ಷಗಳ ಆಯ್ಕೆ ಕಾಲಿಕ ವೇತನ ಶ್ರೇಣಿ ಮಂಜೂರು ಮಾಡಲಾಗಿದೆ.

ಶ್ರೀಮತಿ ಎಸ್.ಎ. ಸುಧಾ, ಜೈನಾಗಮ, ಸಹಾಯಕ ಪಾಧ್ಯಾಪಕರು ಇವರು ದಿನಾಂಕ 30–8–2001ಕ್ಕೆ 15 ವರ್ಷಗಳ ಅವಧಿಯ ಸೇವೆಯನ್ನು ಒಂದೇ ಹುದ್ದೆಯಲ್ಲಿ ಪೂರೈಸಿರುವುದರಿಂದ ಸದರಿಯವರು "Karnataka Civil Services (Automatic Grant of Special promotion to senior scale of pay) Rules 1991" ರ ನಿಯಮ 2(4)ರನ್ವಯ ದಿನಾಂಕ 31–8–2001 ರಿಂದ ಅನ್ವಯವಾಗುವಂತೆ ವೇತನ ಶ್ರೇಣಿ ರೂ. 7400–13120ನ್ನು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಮಂಜೂರು ಮಾಡಲಾಗಿದೆ.

ಶ್ರೀ ಎಸ್.ಎ. ಸುಧಾ, ಜೈನಾಗಮ, ಸಹಾಯಕ ಪ್ರಾಧ್ಯಾಪಕರು, ಇವರು ದಿನಾಂಕ 31–8–1986ರಂದು ಪೂರ್ವಾಹ್ನ ಕರ್ತವ್ಯಕ್ಕೆ ಹಾಜರಾಗಿ ದಿನಾಂಕ 30–8–2006ಕ್ಕೆ ಕೊನೆಗೊಂಡಂತೆ 20 ವರ್ಷಗಳ ಸೇವೆಯನ್ನು ಒಂದೇ ಹುದ್ದೆಯಲ್ಲಿ ಯಾವುದೇ ಪದೋನ್ನತಿ ಇಲ್ಲದೆ ತೃಪ್ತಿಕರವಾಗಿ ಪೂರೈಸಿರುವುದರಿಂದ ದಿನಾಂಕ 9–5–2002ರ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 25 ಎಸ್‌ಆರ್‌ಪಿ 2002ರನ್ವಯ ವೇತನ ಶ್ರೇಣಿ ರೂ. 7400–13120ರಲ್ಲಿ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ದಿನಾಂಕ 31–8–2006 ರಿಂದ ಅನ್ವಯವಾಗುವಂತೆ ಮಂಜೂರು ಮಾಡಲು ಧಾರ್ಮಿಕ ದತ್ತಿ ಆಯುಕ್ತರು ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಧಾರ್ಮಿಕ ದತ್ತಿ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 15 ಮುಸೇವಿ 2007, ಬೆಂಗಳೂರು, ದಿನಾಂಕ: 3ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಮೈಸೂರು ಮಹಾರಾಜ ಸಂಸ್ಕೃತ ಕಾಲೇಜಿನ ಜೈನಾಗಮ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ಎಸ್.ಎ. ಸುಧಾ, ಸಹಾಯಕ ಪ್ರಾಧ್ಯಾಪಕರು, ಇವರು 20 ವರ್ಷಗಳ ಸೇವೆಯನ್ನು ಒಂದೇ ಹುದ್ದೆಯಲ್ಲಿ ಯಾವುದೇ ಪದೋನ್ನತಿ ಇಲ್ಲದೆ ತೃಪ್ತಿಕರವಾಗಿ ಪೂರೈಸಿರುವುದರಿಂದ ದಿನಾಂಕ 9–5–2002ರ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 25 ಎಸ್‌ಆರ್‌ಪಿ 2002ರನ್ವಯ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ದಿನಾಂಕ 31–8–2006 ರಿಂದ ಅನ್ವಯವಾಗುವಂತೆ ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.72

**ಎಲ್.ಎಸ್. ಶ್ರೀಕಂಠಬಾಬು**

ಪೀಠಾಧಿಕಾರಿ

ಕಂದಾಯ ಇಲಾಖೆ (ಮುಜರಾಯಿ)

**ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ವಿಷಯ :** ಶ್ರೀ ಎಂ. ಗುರುಪ್ರಸಾದ್, ಸಹಾಯಕ ನಿಯಂತ್ರಕರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಆನಾಸ 45 ಕಾಮಾಸೇ 06, ದಿನಾಂಕ 17–7–2006.
2. ನಿಯಂತ್ರಕರು, ಕಾನೂನು ಮಾಪನಶಾಸ್ತ್ರ, ಇಲಾಖೆರವರ ಪತ್ರ ಸಂಖ್ಯೆ: ಕಾಮಾಇ/ಸಿಬ್ಬಂದಿ–1/ ಸಿಆರ್–8/108/08–09, ದಿನಾಂಕ 26–11–08.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ ನಿಯಮಗಳು, 1997ರಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಗ್ರೂಪ್ ಬಿ ಹುದ್ದೆಯಲ್ಲಿ ಸಹಾಯಕ ನಿಯಂತ್ರಕರಾಗಿ ಕಾನೂನು ಮಾಪನಶಾಸ್ತ್ರ, ಇಲಾಖೆಗೆ ಆಯ್ಕೆಯಾದ ಶ್ರೀ ಎಂ. ಗುರುಪ್ರಸಾದ್‌ರವರನ್ನು 2 ವರ್ಷಗಳ ಅವಧಿಗೆ

ಪರಿವೀಕ್ಷಣೆಯ ಮೇಲೆ ನೇಮಕ ಮಾಡಲಾಗಿರುತ್ತದೆ ಹಾಗೂ ಪರಿವೀಕ್ಷಣಾ ಅವಧಿಯಲ್ಲಿ ಹುದ್ದೆಗೆ ನಿಗಧಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಬೇಕೆಂದು ತಿಳಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ನಿಯಂತ್ರಕರ ಪತ್ರ ದಿನಾಂಕ 26–11–2008ರಲ್ಲಿ ಶ್ರೀ ಎಂ. ಗುರುಪ್ರಸಾದ್, ಸಹಾಯಕ ನಿಯಂತ್ರಕರು 2 ವರ್ಷದ ಪರಿವೀಕ್ಷಣಾ ಅವಧಿಯಲ್ಲಿ ಹುದ್ದೆಗೆ ನಿಗಧಿಪಡಿಸಿರುವ ಇಲಾಖಾ ಪರೀಕ್ಷೆಗಳಾದ ಅಕೌಂಟ್ಸ್ ಹೈಯರ್ ಹಾಗೂ ರಾಂಚಿ ತರಬೇತಿಯಲ್ಲಿನ ಅರ್ಹತಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿಲ್ಲವೆಂದು ತಿಳಿಸಲಾಗಿದೆ.

ಆದ್ದರಿಂದ ಸರ್ಕಾರವು ಸದರಿ ಅಧಿಕಾರಿಯ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಅಗತ್ಯವನ್ನು ಗಮನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 71 ಕಾಮಾಸೇ 2008, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮ 1977, 4(1)ರ ಅನ್ವಯ ಶ್ರೀ ಎಂ. ಗುರುಪ್ರಸಾದ್, ಸಹಾಯಕ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆರವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ 28–7–2008 ರಿಂದ 1 ವರ್ಷದ ಅವಧಿಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.85

**ಕೆ. ಭವಾನಿ**

ಪೀಠಾಧಿಕಾರಿ (ಪ್ರ), ಆಹಾರ–1 ಶಾಖೆ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ
ವ್ಯವಹಾರಗಳ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಸಿ.ಜಿ. ಕೃಷ್ಣ, ಇವರಿಗೆ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಪದೋನ್ನತಿ ನೀಡಿರುವ ಆದೇಶವನ್ನು ಹಿಂದಕ್ಕೆ ಪಡೆಯುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 275 ಮುಸೇವಿ 2007, ದಿನಾಂಕ 29–2–2008.
2. ಧಾರ್ಮಿಕ ದತ್ತಿ ಆಯುಕ್ತರ ಪತ್ರ ದಿನಾಂಕ: 17–6–2008.
3. ಶ್ರೀ ಸಿ.ಜಿ. ಕೃಷ್ಣ, ಪ್ರಥಮ ದರ್ಜೆ ಸಹಾಯಕರು, ಶ್ರೀ ಚಾಮುಂಡೇಶ್ವರಿ ದೇವಸ್ಥಾನ ಇವರಿಗೆ ನೀಡಿದ ನೋಟೀಸ್ ಸಂಖ್ಯೆ; ಕಂಇ 257 ಮುಸೇವಿ 2004, ದಿನಾಂಕ 25–8–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಶ್ರೀ ಸಿ.ಜಿ. ಕೃಷ್ಣ, ಇವರೂ ಸೇರಿದಂತೆ ಒಟ್ಟು 24 ದ್ವಿತೀಯ ದರ್ಜೆ ಸಹಾಯಕರುಗಳಿಗೆ ದಿನಾಂಕ 1–5–2007 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ನೀಡಿ ಆದೇಶಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದಂತೆ ಧಾರ್ಮಿಕ ದತ್ತಿ ಆಯುಕ್ತರು ಸರ್ಕಾರಕ್ಕೆ ಪತ್ರ ಬರೆದು ಶ್ರೀ ಸಿ.ಜಿ. ಕೃಷ್ಣ ಇವರ ವೇತನವನ್ನು ಪ್ರಥಮ ದರ್ಜೆ ಸಹಾಯಕರ ವೃಂದದಲ್ಲಿ ನಿಗಧಿಪಡಿಸುವ ಬಗ್ಗೆ ಪರಿಶೀಲಿಸಲಾಗಿ, ಸದರಿಯವರು ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಅವಶ್ಯವಾದ ಇಲಾಖಾ ಪರೀಕ್ಷೆಗಳಲ್ಲೊಂದಾದ ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವುದಿಲ್ಲವೆಂದೂ, ಆದುದರಿಂದ ಸದರಿ ನೌಕರರಿಗೆ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಪದೋನ್ನತಿ ನೀಡಿರುವ ದಿನಾಂಕ 29–2–2008ರ ಆದೇಶವನ್ನು ಅವರಿಗೆ ಮಾತ್ರ ಅನ್ವಯಿಸುವಂತೆ ಹಿಂದಕ್ಕೆ ಪಡೆಯುವಂತೆ ಕೋರಿರುತ್ತಾರೆ.

ಧಾರ್ಮಿಕ ದತ್ತಿ ಆಯುಕ್ತರ ಪ್ರಸ್ತಾವನೆಯಂತೆ ಶ್ರೀ ಸಿ.ಜಿ. ಕೃಷ್ಣ, ಪ್ರಥಮ ದರ್ಜೆ ಸಹಾಯಕರು ಇವರಿಗೆ ಮೇಲೆ (3)ರಲ್ಲಿ ಓದಲಾದಂತೆ ನೋಟೀಸ್ ನೀಡಿ, ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಅವಶ್ಯವಾದ ಇಲಾಖಾ ಪರೀಕ್ಷೆಯಾದ ಅಕೌಂಟ್ಸ್ ಹೈಯರ್ ಪರೀಕ್ಷೆಯನ್ನು ಪಾಸು ಮಾಡದೇ ಇರುವುದರಿಂದ ದಿನಾಂಕ 29–2–2008ರಲ್ಲಿ ನೀಡಿರುವ ಬಡ್ತಿಯು ನಿಯಮಬಾಹಿರವಾಗಿದ್ದು, ಸದರಿ ನಿಯಮಬಾಹಿರವಾದ ಬಡ್ತಿಯನ್ನು ಏಕೆ ಹಿಂದಕ್ಕೆ ಪಡೆಯಬಾರದೆಂಬ ಬಗ್ಗೆ 15 ದಿನಗಳ ಒಳಗೆ ವಿವರಣೆ ನೀಡುವಂತೆ ಕೋರಲಾಗಿತ್ತು. ಸದರಿ ನೋಟೀಸಿಗೆ ಶ್ರೀ ಸಿ.ಜಿ. ಕೃಷ್ಣ ಇವರು ಯಾವುದೇ ವಿವರಣೆ ನೀಡಿರುವುದಿಲ್ಲ.

ಆದುದರಿಂದ ಧಾರ್ಮಿಕ ದತ್ತಿ ಆಯುಕ್ತರ ಪ್ರಸ್ತಾವನೆಯಂತೆ ಶ್ರೀ ಸಿ.ಜಿ. ಕೃಷ್ಣ, ಇವರಿಗೆ ನಿಯಮಬಾಹಿರವಾಗಿ ನೀಡಿರುವ ಬಡ್ತಿಯನ್ನು ಹಿಂದಕ್ಕೆ ಪಡೆಯಲು ಸರ್ಕಾರವು ತೀರ್ಮಾನಿಸಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 83 ಮುಸೇವಿ 2008, ಬೆಂಗಳೂರು, ದಿನಾಂಕ: 12ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಸಿ.ಜಿ. ಕೃಷ್ಣ ಇವರಿಗೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 275 ಮುಸೇವಿ 2007, ದಿನಾಂಕ 29–2–2008ರಲ್ಲಿ ದ್ವಿತೀಯ ದರ್ಜೆ ಸಹಾಯಕ ವೃಂದದಿಂದ ಪ್ರಥಮ ದರ್ಜೆ ಸಹಾಯಕರ ವೃಂದಕ್ಕೆ ನೀಡಲಾದ ಬಡ್ತಿಯನ್ನು ಇವರಿಗೆ ಮಾತ್ರ ಅನ್ವಯಿಸುವಂತೆ ಸರ್ಕಾರವು ಹಿಂದಕ್ಕೆ ಪಡೆದುಕೊಂಡಿದೆ. ಶ್ರೀ ಸಿ.ಜಿ. ಕೃಷ್ಣ ಇವರು ದ್ವಿತೀಯ ದರ್ಜೆ ಸಹಾಯಕರಾಗಿ ಮುಂದುವರೆಯುತ್ತಾರೆ. ಈ ಬಗ್ಗೆ ಕೂಡಲೇ ಮುಂದಿನ ಅಗತ್ಯ ಕ್ರಮ ಕೈಗೊಳ್ಳುವಂತೆ ಧಾರ್ಮಿಕ ದತ್ತಿ ಆಯುಕ್ತರಿಗೆ ತಿಳಿಸಲಾಗಿದೆ.

ಸದರಿ ಆದೇಶವನ್ನು ಸಿಆಸು ಇಲಾಖೆಯ ಟಿಪ್ಪಣಿ ಸಂಖ್ಯೆ: ಸಿಆಸುಇ 474 ಸೇನಿಎ 2008, ದಿನಾಂಕ 24–11–2008ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.80

**ಎಲ್.ಎಸ್. ಶ್ರೀಕಂಠಬಾಬು**

ಪೀಠಾಧಿಕಾರಿ

ಕಂದಾಯ ಇಲಾಖೆ (ಮುಜರಾಯಿ)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಪಿ.ಎನ್. ಜಯಸಿಂಹ, ಪಾಚಾರ್ಯರು, ಕಾರಾಗೃಹಗಳ ಸಿಬ್ಬಂದಿ ತರಬೇತಿ ಸಂಸ್ಥೆ, ಮೈಸೂರು ಹಾಗೂ ಶ್ರೀ ನಂಜಪ್ಪ, ಸಹಾಯಕ ಅಧೀಕ್ಷಕರು, ಬೆಂಗಳೂರು ಕೇಂದ್ರ ಕಾರಾಗೃಹ, ಬೆಂಗಳೂರು, ಇವರ ಅಮಾನತ್ತನ್ನು ರದ್ದುಪಡಿಸಿ ಸೇವೆಗೆ ಪುನರ್ ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಒಸಾಇ 177 ಪಿಆರ್ಇ 2003, ದಿನಾಂಕ 15–12–2003.
2. ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 39 ಪಿಆರ್ಇ 2005, ದಿನಾಂಕ 9–6–2005.
3. ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 177 ಪಿಆರ್‌ಡಿ 2003, ದಿನಾಂಕ 7–9–2004.
4. ಶ್ರೀ ಪಿ.ಎನ್. ಜಯಸಿಂಹ, ಪ್ರಾಚಾರ್ಯರು ಕಾರಾಗೃಹಗಳ ಸಿಬ್ಬಂದಿ ತರಬೇತಿ ಸಂಸ್ಥೆ, ಮೈಸೂರು (ಅಮಾನತ್ತಿನಲ್ಲಿರುವ) ಇವರ ಮನವಿ ದಿನಾಂಕ 6–12–2007.
5. ಶ್ರೀ ನಂಜಪ್ಪ, ಸಹಾಯಕ ಅಧೀಕ್ಷಕರು, ಬೆಂಗಳೂರು ಕೇಂದ್ರ ಕಾರಾಗೃಹ, ಬೆಂಗಳೂರು (ಅಮಾನತ್ತಿನಲ್ಲಿರುವ) ಇವರ ಮನವಿ ದಿನಾಂಕ 15–10–2007.
6. ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರು, ಇವರ ಪತ್ರ ಸಂಖ್ಯೆ: ವಿಚಾರಣೆ/ಸಿಆರ್–33/2003, ದಿನಾಂಕ 21–8–2008.

**ಪ್ರಸ್ತಾವನೆ :**

ನಕಲಿ ಛಾಪಾ ಕಾಗದ ಹಗರಣದ ಪ್ರಮುಖ ಆರೋಪಿ ಶ್ರೀ ಅಬ್ದುಲ್ ಕರೀಂ ತಲಗಿ ಮತ್ತು ಆತನ ಸಹಚರರು ಆರೋಪಿಗಳಾಗಿ ಬೆಂಗಳೂರಿನ ಪರಪ್ಪನ ಅಗ್ರಹಾರದಲ್ಲಿರುವ ಕೇಂದ್ರ ಕಾರಾಗೃಹದಲ್ಲಿ ದಿನಾಂಕ 22–11–2001 ರಿಂದ ಸೆಪ್ಟೆಂಬರ್ 2002ರವರೆಗೆ ನ್ಯಾಯಾಂಗ ಬಂಧನದಲ್ಲಿದ್ದರು. ಆಗ, ಬೆಂಗಳೂರು ಕೇಂದ್ರ ಕಾಗಾಗೃಹದಲ್ಲಿ ಹಿರಿಯ ಅಧೀಕ್ಷಕರಾಗಿದ್ದ ಶ್ರೀ ಪಿ.ಎನ್. ಜಯಸಿಂಹ ಮತ್ತು ಸಹಾಯಕ ಅಧೀಕ್ಷಕರಾಗಿದ್ದ ಶ್ರೀ ನಂಜಪ್ಪ, ಇವರು ಕಾರಾಗೃಹಗಳ ನೀತಿ ನಿಯಮಗಳನ್ನು ಹಾಗೂ ಕಾನೂನುಗಳನ್ನು ಉಲ್ಲಂಘಿಸಿ, ಶ್ರೀ ಅಬ್ದುಲ್ ಕರೀಂ ತಲಗಿಗೆ ಆತನ ಮೋಸದ ಮತ್ತು ವಂಚನೆಯ ಕಾರ್ಯಚಟುವಟಿಕೆಗಳಿಗೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಕೆಲವು ಸೌಲಭ್ಯಗಳನ್ನು ಹಾಗೂ ಸಹಕಾರಗಳನ್ನು ಒದಗಿಸಿದರು ಎಂಬ ಕಾರಣಕ್ಕಾಗಿ ಶ್ರೀ ಪಿ.ಎನ್. ಜಯಸಿಂಹ ಮತ್ತು ಶ್ರೀ ನಂಜಪ್ಪ ಇವರನ್ನು ಅಪರಾಧ ಸಂಖ್ಯೆ: 1100/2002 ರಲ್ಲಿ ದಿನಾಂಕ 9–12–2003 ರಂದು ಪೊಲೀಸ್ ಇಲಾಖೆಯವರು ಬಂಧಿಸಿದರು. ಈ ಹಿನ್ನೆಲೆಯಲ್ಲಿ, ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 10(2)(ಎ) ರನ್ವಯ ದಿನಾಂಕ 9–12–2003 ರಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದರಿ ಅಧಿಕಾರಿಗಳನ್ನು ಸರ್ಕಾರಿ ಸೇವೆಯಿಂದ ಅಮಾನತ್ತುಪಡಿಸಲಾಯಿತು.

ನಕಲಿ ಛಾಪಾ ಕಾಗದದ ಪ್ರಕರಣದ ತನಿಖೆಯನ್ನು ಸಿಬಿಐ ತೆಗೆದುಕೊಂಡಿತು. ಶ್ರೀ ಪಿ.ಎನ್. ಜಯಸಿಂಹ ಮತ್ತು ಶ್ರೀ ನಂಜಪ್ಪ ರವರು ನಿಯಮಗಳನ್ನು ಉಲ್ಲಂಘಿಸಿ ಕರ್ತವ್ಯವನ್ನು ನಿರ್ವಹಿಸಿರುತ್ತಾರೆ ಮತ್ತು ಅವರ ಮೇಲಿನ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗುತ್ತವೆಂದು ಕಂಡು ಬರುವುದರಿಂದ ಸದರಿಯವರನ್ನು ಅಭಿಯೋಗಗೊಳಿಸುವಂತೆ ಸಿಬಿಐ ಸರ್ಕಾರಕ್ಕೆ ಸಲ್ಲಿಸಿದ ವರದಿಯಲ್ಲಿ ಕೋರಿತ್ತು.

ಈ ಕೋರಿಕೆ ಮೇರೆಗೆ, ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಪಿ.ಎನ್. ಜಯಸಿಂಹ ಮತ್ತು ಶ್ರೀ ನಂಜಪ್ಪ, ರವರನ್ನು ಅಭಿಯೋಗಗೊಳಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಯಿತು.

ಮೇಲೆ (3)ರಲ್ಲಿ ಓದಲಾದ ಆದೇಶದಲ್ಲಿ, ಶ್ರೀ ಪಿ.ಎನ್. ಜಯಸಿಂಹ ಮತ್ತು ಶ್ರೀ ನಂಜಪ್ಪ, ಇವರಿಗೆ ನೀಡಲಾಗುತ್ತಿದ್ದ ಜೀವನಾಂಶ ಭತ್ಯೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 (1)(i)ರ ಅನ್ವಯ ಶೇಕಡ 50 ರಿಂದ ಶೇಕಡ 75ಕ್ಕೆ ಹೆಚ್ಚಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಯಿತು. ಅದರಂತೆ ಪ್ರಸ್ತುತ ಸದರಿಯವರು ಶೇಕಡ 75ರಷ್ಟು ಜೀವನಾಂಶ ಭತ್ಯೆಯನ್ನು ಪಡೆಯುತ್ತಿದ್ದಾರೆ.

ಶ್ರೀ ಪಿ.ಎನ್. ಜಯಸಿಂಹ ಮತ್ತು ಶ್ರೀ ನಂಜಪ್ಪರವರ ವಿರುದ್ಧ ಅಪರಾಧ ಸಂಖ್ಯೆ: 1100/2002 ಪ್ರಸ್ತುತ ಬೆಂಗಳೂರಿನ 35ನೇ ಸಿವಿಲ್ ಹಾಗೂ ವಿಶೇಷ ಸತ್ರ ಗೌ: ನ್ಯಾಯಾಲಯದಲ್ಲಿ ಎಸ್.ಸಿ. ಸಂಖ್ಯೆ: 643/2002ರಲ್ಲಿ ವಿಚಾರಣೆಯಲ್ಲಿದೆ. ಅಂತಿಮ ತೀರ್ಪು ಇನ್ನೂ ಹೊರಬಂದಿಲ್ಲ. ಪ್ರಸ್ತುತ ಸದರಿ ಅಧಿಕಾರಿಗಳು ಜಾಮೀನಿನ ಮೇಲೆ ಬಿಡುಗಡೆ ಹೊಂದಿರುತ್ತಾರೆ.

ಶ್ರೀ ಪಿ.ಎನ್. ಜಯಸಿಂಹ ಮತ್ತು ಶ್ರೀ ನಂಜಪ್ಪ ರವರು ಮೇಲೆ 4 ಮತ್ತು 5 ರಲ್ಲಿ ಓದಲಾದ ಸರ್ಕಾರಕ್ಕೆ ಸಲ್ಲಿಸಿದ ಪ್ರತ್ಯೇಕ ಮನವಿಗಳಲ್ಲಿ, ದಿನಾಂಕ 9–12–2003 ರಿಂದ ಅಮಾನತ್ತಿನಲ್ಲಿ ಇರಿಸಲಾಗಿದೆ. ಶೇಕಡ 75ರಷ್ಟು ಜೀವನಾಂಶ ನೀಡಲಾಗುತ್ತಿದೆ. ಅಂದಿನಿಂದ ಪ್ರಕರಣವು ಈವರೆವಿಗೂ ಇತ್ಯರ್ಥವಾಗಿರುವುದಿಲ್ಲ. ಕುಟುಂಬ ನಿರ್ವಹನೆಗೆ ತುಂಬಾ ತೊಂದರೆಯಾಗಿದೆ. ಆದುದರಿಂದ ಅಮಾನತ್ತನ್ನು ರದ್ದುಪಡಿಸಿ ಮತ್ತೆ ಸೇವೆಗೆ ತೆಗೆದುಕೊಳ್ಳಬೇಕೆಂದು ಕೋರಿರುತ್ತಾರೆ. ಯಥಾ ಮನವಿಗಳನ್ನು ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರವರಿಗೂ ಸಲ್ಲಿಸಿರುತ್ತಾರೆ.

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರವರು ಮೇಲೆ (6)ರಲ್ಲಿ ಓದಲಾದ ಪತ್ರದಲ್ಲಿ, ಶ್ರೀ ಪಿ.ಎನ್. ಜಯಸಿಂಹ ಮತ್ತು ಶ್ರೀ ನಂಜಪ್ಪ ರವರ ಮನವಿಗಳನ್ನು ಸರ್ಕಾರಕ್ಕೆ ಕಳುಹಿಸಿಕೊಡುತ್ತಾ, ನೇಮಕ ಪ್ರಾಧಿಕಾರಿಯಾದ ಸರ್ಕಾರವು ಸಿಸಿ ಮತ್ತು ಎ ನಿಯಮಾವಳಿಗಳನ್ವಯ ಸದರಿ ಅಧಿಕಾರಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸಬಹುದಾಗಿದೆ. ಇವರುಗಳ ವಿರುದ್ಧದ ಕ್ರಿಮಿನಲ್ ಪ್ರಕರಣಗಳು 4 ವರ್ಷಗಳಿಂದಲೂ ನ್ಯಾಯಾಲಯದಲ್ಲಿ ಬಾಕಿ ಇರುತ್ತವೆ. ಆದರೆ ಇವರು ಜಾಮೀನಿನ ಮೇಲೆ ಬಿಡುಗಡೆಯಾಗಿರುತ್ತಾರೆ. ಇವರುಗಳು ಕಳೆದ 4 ವರ್ಷಗಳಿಂದ ನಿಲಂಬನೆಯಲ್ಲಿ ಇದ್ದಾರೆ. ಈ ಕಾರಣಗಳಿಂದ ಇವರುಗಳನ್ನು ನಿಲಂಬನದಿಂದ ಬಿಡುಗಡೆ ಮಾಡುವ ಮನವಿಯನ್ನು ಸಹಾನುಭೂತಿಯಿಂದ ಪರಿಗಣಿಸಬೇಕೆಂದು ಕೋರಿರುತ್ತಾರೆ.

ಈ ಕೋರಿಕೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 91 ಪಿಆರ್‌ಇ 2007, ಬೆಂಗಳೂರು, ದಿನಾಂಕ: 22ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ 10ನೇ ನಿಯಮ, 5ನೇ ಉಪ ನಿಯಮ (ಸಿ) ರನ್ವಯ ಶ್ರೀ ಪಿ.ಎನ್. ಜಯಸಿಂಹ, ಪ್ರಾಚಾರ್ಯರು, ಕಾರಾಗೃಹಗಳ ಸಿಬ್ಬಂದಿ ತರಬೇತಿ ಸಂಸ್ಥೆ, ಮೈಸೂರು ಹಾಗೂ ಶ್ರೀ ನಂಜಪ್ಪ, ಸಹಾಯಕ ಅಧೀಕ್ಷಕರು, ಬೆಂಗಳೂರು ಕೇಂದ್ರ ಕಾರಾಗೃಹ, ಬೆಂಗಳೂರು, ಇವರುಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆವಿಗೆ ಇಲಾಖಾ ಕ್ರಮವನ್ನು ಬಾಕಿ ಇರಿಸಿ, ಅಮಾನತ್ತಿನಿಂದ ಬಿಡುಗಡೆಗೊಳಿಸಿ, ಮೈಸೂರಿನಲ್ಲಿರುವ ಕಾರಾಗೃಹಗಳ ಸಿಬ್ಬಂದಿ ತರಬೇತಿ ಸಂಸ್ಥೆಗೆ ವರ್ಗಾಯಿಸಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.91

**ಟಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಸೈಯದ್‌ಗೌಸ್ ಮೊಹಿಯುದ್ದಿನ್ ಹಿರಿಯ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ, ಇವರ ಅನಧಿಕೃತ ಗೈರುಹಾಜರಿಗೆ ಸಂಬಂಧಿಸಿದಂತೆ ಸೇವೆಯಿಂದ ವಜಾ ಮಾಡುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರ ಕಾರಣ ಕೇಳುವ ನೋಟೀಸ್ ಸಂಖ್ಯೆ; ಡಿಪಿಜಿ/ಮೈವಿ/29/04–05, ದಿನಾಂಕ 8–1–2005.
2. ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರ ವಿಚಾರಣಾ ಆದೇಶ ಸಂಖ್ಯೆ: ಡಿಪಿಜಿ/ಮೈವಿ/29/04–05, ದಿನಾಂಕ 15–6–2005.
3. ಮುಖ್ಯ ಜಾಗೃತಾಧಿಕಾರಿಗಳು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರ ವರದಿ ಸಂಖ್ಯೆ: ಮುಜಾಅ/ಜಾಕೋ/08/2005–06, ದಿನಾಂಕ 3–1–2006.
4. ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರ ತಿಳುವಳಿಕೆ ಪತ್ರ ಸಂಖ್ಯೆ; ಡಿಪಿಜಿ/ಮೈವಿ/29/04–05, ದಿನಾಂಕ 15–2–2006.
5. ಡಾ: ಸೈಯದ್‌ಗೌಸ್ ಮೊಹಿಯುದ್ದೀನ್ ಇವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ 9–4–2006.
6. ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರ ಪತ್ರ ಸಂಖ್ಯೆ: ಡಿಪಿಜಿ/ಮೈವಿ/29/04–05, ದಿನಾಂಕ 19–9–2008.

**ಪ್ರಸ್ತಾವನೆ :**

ಡಾ: ಸೈಯದ್‌ಗೌಸ್ ಮೊಹಿಯುದ್ದಿನ್, ಹಿರಿಯ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ ಇವರು ದಿನಾಂಕ 23–3–2004 ರಿಂದ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಿಯಾಗಿರುವ ಆರೋಪಕ್ಕೆ ಸಂಬಂಧಿಸಿದಂತೆ ಶಿಸ್ತುಕ್ರಮ ಜರುಗಿಸುವ ಸಲುವಾಗಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ರವರು ಮೇಲೆ (1)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಜಾರಿಗೊಳಿಸಿದ್ದರು.

ಆರೋಪಿತ ವೈದ್ಯಾಧಿಕಾರಿಯು ಸದರಿ ಕಾರಣ ಕೇಳುವ ನೋಟೀಸಿಗೆ ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲವಾದ್ದರಿಂದ, ಈ ಆರೋಪಕ್ಕೆ ಸಂಬಂಧಿಸಿದಂತೆ ಸದರಿ ಪ್ರಕರಣದ ಬಗ್ಗೆ ಸತ್ಯಾಸತ್ಯತೆಯನ್ನು ಅರಿಯುವ ಸಲುವಾಗಿ ಆರೋಪಿತರನ್ನು ಇಲಾಖಾ ವಿಚಾರಣೆಗೆ ಗುರಿಪಡಿಸಲು ತೀರ್ಮಾನಿಸಿ, ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರು ಈ ಪ್ರಕರಣದಲ್ಲಿ ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳನ್ನು ನೇಮಿಸಿ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಮುಖ್ಯ ಜಾಗೃತಾಧಿಕಾರಿಗಳು (ಜಾಗೃತ ಕೋಶ), ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರು ವಿಚಾರಣೆ ನಡೆಸಿ, ವಿಚಾರಣಾ ವರದಿಯಲ್ಲಿ ಆಪಾದಿತ ವೈದ್ಯರ ವಿರುದ್ಧ ಮಾಡಲಾದ ಅನಧಿಕೃತ ಗೈರುಹಾಜರಿಯ ಆರೋಪವು ನಿಸ್ಸಂಶಯವಾಗಿ ರುಜುವಾತಾಗಿದೆ ಎಂದು ವಿಚಾರಣಾಧಿಕಾರಿಗಳು ತಿಳಿಸುತ್ತಾ ವಿಚಾರಣಾ ವರದಿಯನ್ನು ಆಯುಕ್ತರಿಗೆ ಸಲ್ಲಿಸಿದ್ದಾರೆ.

ಮೇಲೆ (4)ರಲ್ಲಿ ಓದಲಾದ ತಿಳುವಳಿಕೆ ಪತ್ರದ ಮೂಲಕ ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರು ವಿಚಾರಣಾ ವರದಿಯನ್ನು ಸದರಿ ವೈದ್ಯರಿಗೆ ಜಾರಿ ಮಾಡಿದ್ದು, ಮೇಲೆ (5)ರಲ್ಲಿ ಓದಲಾದ ಡಾ: ಸೈಯದ್‌ಗೌಸ್ ಮೊಹಿಯುದ್ದೀನ್ ರವರು ತಿಳುವಳಿಕೆ ಪತ್ರಕ್ಕೆ ತಮ್ಮ ಪ್ರತಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದು, ವಿಚಾರಣಾ ವರದಿಯನ್ನು ಅಲ್ಲಗಳೆದು ರಜೆ ಮಂಜೂರು ಮತ್ತು ನಿವೃತ್ತಿಗೆ ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ಮೇಲೆ (6)ರಲ್ಲಿ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಡಾ: ಸೈಯದ್‌ಗೌಸ್ ಮೊಹಿಯುದ್ದೀನ್ ಇವರ ಅನಧಿಕೃತ ಗೈರುಹಾಜರಿ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ, ಇವರಿಗೆ ಕಠಿಣ ದಂಡನೆಯನ್ನು ವಿಧಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿ ಕೊಟ್ಟಿರುತ್ತಾರೆ.

ಸರ್ಕಾರವು ಆಯುಕ್ತರ ಪ್ರಸ್ತಾವನೆ, ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಡಾ: ಸೈಯದ್‌ಗೌಸ್ ಮೊಹಿಯುದ್ದೀನ್ ಹಿರಿಯ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ ಇವರು

ದಿನಾಂಕ: 23–3–2004 ರಿಂದ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ, ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ–8(viii) ರಡಿಯಲ್ಲಿ ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 396 ಎಂಎಸ್ಎ 2008, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು, ಡಾ: ಸೈಯದ್‌ಗೌಸ್ ಮೊಹಿಯುದ್ದೀನ್ ಹಿರಿಯ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ ಇವರು 23–3–2004 ರಿಂದ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದರಿಂದ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ, ನಿಯಮ–8(viii) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.129

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## HEALTH AND FAMILY WELFARE SECRETARIAT

**Sub :** Creation of a posts of one Accounts Superintendent and five drivers in KHSDRP – reg.

**Read :**
1. Govt. Order HFW/KHSDRP/Sect/1/2006, Bangalore, dated 30-12-2006.
2. Govt. Order No. HFW/KHSDRP/Sect/54/2007, Bangalore, dt: 13-3-2008.
3. Proceeddings of the third meeting of the Programme Steering Committee dated 24-1-2008.
4. Proceedings of the Project Governing Board meeting dt: 29-5-2008.

**Preamble:**

Government in their Order read at (1) above approved the World Bank assisted Karnataka Health System Development and Reform Project and its organisational structure field level offices were established for effective Project implementation.

Under the same, 16 posts of drivers were created for the Project Office. The posts of drivers were not created for any of the field offices of the Project since it was decided to hire vehicles with drivers in the field. However, some of the engineering field offices of the Project were already existing prior to the launch of KHSDRP and they were implementing other works of the Department of Health and Family Welfare. They were also utilising Govt vehicles. These offices were later renamed and redesigned to suit the requirement of the present Project, i.e., KHSDRP. A proposal was therefore placed before the third meeting of the Programme Steering Committee to create a few posts of drivers for the Engineering Division/ Sub-Division offices that had Govt vehicles so that drivers could be hired to run them. Similarly a few additional posts were proposed for creation in the project office.

In the G.O. read at (2) above, a new Engineering Division Office and a Sub-Division office were created at Mysore and Hassan after considering the quantum of work in these areas. The existing jurisdiction of field offices was accordingly redesigned. Each division office of the Project is headed by an Executive Engineer and supporting staff, including an Accounts Superintendent. However, this post was not created while establishing the Division Office at Mysore although it is essential to have an Accounts Superintendent in the field Offices. The said proposal was placed before the Project Governing Board in its 2nd meeting (read 4). The Board approved the same.

The Programme Steering Committee approved the above proposal for creating the posts of drivers in order to facilitate payment to the drivers who had been hired for effective office functioning (read 3). The Committee recommended the same to the Project Governing Board for ratification. The Project Governing Board in its second meeting held on 29-5-2008 approved the same (read 4) and ratified action taken by the Committee.

Hence, the following order.

**Government Order No. HFW/KHSDRP/Sect-1/2006, Bangalore, Dated 18th July 2008**

Under the circumstances mentioned in the preamble, Government are hereby pleased to create the following additional posts i.e., drivers, with effect from 24-1-2008; and Accounts Superintendent with effect from 7-3-2008; under Karnataka Health System Development and Reform Project.

| Sl. No. | Name of the Post | No. of Posts | Pay Scale | Name of the Office |
|---|---|---|---|---|
| 1 | Accounts Superintendent | 1 | 10800-20025 | Engineering Division Office, Mysore |
| 2 | Driver | 1 | 5800-10500 | Engineering Division Office, Mysore |
| 3 | Driver | 1 | 5800-10500 | Engineering Division Office, Bangalore |
| 4 | Driver | 1 | 5800-10500 | Engineering Sub-Division Office, Shimoga |
| 5 | Driver | 1 | 5800-10500 | Engineering Sub-Division Office, Dharwad |
| 6 | Driver | 1 | 5800-10500 | Engineering Sub-Division Office, Raichur |
| 7 | Driver | 1 | 5800-10500 | KHSDRP Office, Bangalore |
| | **Total** | **10** | | |

By order and in the name of the Governor of Karnataka,

PR. 127

**SUSHAMA GODBOLE**

Deputy Secretary to Government,

KHSDRP

Health and Family Welfare Department.

**ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ವಿಷಯ :** ಶ್ರೀ ಎಂ. ಗೋಪಾಲಪ್ಪ, ಸಹಾಯಕ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಆಲಿ ಆಸ್ಕರ್ ರಸ್ತೆ, ಬೆಂಗಳೂರು ಇವರನ್ನು ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ/ಐಎನ್‌ವಿ(ಜಿ)ಸಿಟಿ/ಕ್ರೈಂ.61/2008, ದಿನಾಂಕ 13/15.10.2008.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಕರ್ನಾಟಕ ಲೋಕಾಯುಕ್ತರವರು ಈ ಪ್ರಕರಣದ ಬಗ್ಗೆ ವಿವರಗಳನ್ನು ನೀಡಿದ್ದಾರೆ. ದಿನಾಂಕ 10–10–2008ರಂದು ಶ್ರಿ ಬಿ.ವಿ. ನವೀನ್, ಬನಶಂಕರಿ, 2ನೇ ಹಂತ, ಬೆಂಗಳೂರು, ಇವರು ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆಗೆ ದೂರು ನೀಡಿ ಫಿರ್ಯಾದುದಾರರು ಟೀ ಪ್ಯಾಕಿಂಗ್ ವ್ಯಾಪಾರ ನಡೆಸುವ ಸಲುವಾಗಿ ಲೈಸೆನ್ಸ್ ಪಡೆಯಲು ಕಾನೂನು ಮಾಪನಶಾಸ್ತ್ರ, ಇಲಾಖೆಯ ಶ್ರೀ ಎಂ. ಗೋಪಾಲಪ್ಪ, ಸಹಾಯಕ ನಿಯಂತ್ರಕರು, ಲೈಸೆನ್ಸ್ ನೀಡಲು ರೂ. 20,000/– ಲಂಚ ಕೇಳಿದ್ದು, ಕೊಟ್ಟಲ್ಲಿ ಅರ್ಜಿಯೊಂದಿಗೆ ಫಿರ್ಯಾದುದಾರರ ಮನೆಗೆ ಬರುತ್ತೇನೆಂದು ತಿಳಿಸಿರುತ್ತಾರೆ. ಆದರೆ ಫಿರ್ಯಾದುದಾರರಿಗೆ ಲಂಚ ನೀಡಲು ಇಷ್ಟವಿಲ್ಲದ ಕಾರಣ ಸದರಿಯವರ ವಿರುದ್ಧ ಕಾನೂನು ಪ್ರಕಾರ ಕ್ರಮ ಕೈಗೊಳ್ಳಲು ಕೋರಿದ್ದು, ಸದರಿ ದೂರಿನ ಹಿನ್ನಲೆಯಲ್ಲಿ ಲಂಚ ವಿರೋಧ ಕಾಯ್ದೆ 1988ರ ಕಲಂ 7, 13(1)(ಡಿ)

ಸಹವಾಚನ ಕಲಂ 13(2)ರ ಪ್ರಕಾರ ದಿನಾಂಕ 10-10-2008ರಂದು ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ: 61/2008ರಲ್ಲಿ ಪ್ರಕರಣ ದಾಖಲಿಸಿರುವುದಾಗಿ ತಿಳಿಸಿರುತ್ತಾರೆ.

ಮುಂದುವರೆದಂತೆ, ಶ್ರೀ ಎಂ. ಗೋಪಾಲಪ್ಪ, ಸಹಾಯಕ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಇವರು ಫಿರ್ಯಾದುದಾರರಿಂದ, ಫಿರ್ಯಾದುದಾರರ ಮನೆಯಲ್ಲಿ ರೂ. 20,000/- ಲಂಚದ ಹಣ ಪಡೆಯುತ್ತಿರುವಾಗ ಲೋಕಾಯುಕ್ತ ಪೊಲೀಸರಿಗೆ ನೇರವಾಗಿ ಸಿಕ್ಕಿಬಿದ್ದಿರುತ್ತಾರೆ ಹಾಗೂ ಲಂಚದ ಹಣ ರೂ. 20,000/-ಗಳನ್ನು ಆರೋಪಿತರ ವಶದಿಂದ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ ಹಾಗೂ ಆರೋಪಿತರನ್ನು ದಿನಾಂಕ 10-10-2008ರಂದು ದಸ್ತಗಿರಿ ಮಾಡಿ ನ್ಯಾಯಾಂಗ ಬಂಧನಕ್ಕೆ ಒಪ್ಪಿಸಲಾಗಿತ್ತು ಹಾಗೂ ಆರೋಪಿತರು ದಿನಾಂಕ 13-10-2008ರಂದು ಜಾಮೀನಿನ ಮೇಲೆ ಬಿಡುಗಡೆಯಾಗಿರುತ್ತಾರೆಂದು ತಿಳಿಸಲಾಗಿದೆ. ಆರೋಪಿತರ ಮೇಲೆ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ ಎಂದು ತಿಳಿಸಿ ಆರೋಪಿತ ಅಧಿಕಾರಿ ತಮ್ಮ ಸ್ಥಾನದಲ್ಲಿ ಮುಂದುವರೆದಲ್ಲಿ ತನಿಖೆಯ ಹಾದಿ ತಪ್ಪಿಸುವ ಮತ್ತು ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಸಾಧ್ಯತೆಗಳಿರುವುದರಿಂದ ಇವರ ಲೀಸ್ (ಸ್ಥಾನ) ಅನ್ನು ಬೇರೆ ಕಡೆಗೆ ವರ್ಗಾಯಿಸಿ ಕರ್ನಾಟಕಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಗಳು-1957ರ ನಿಯಮ 10ರನ್ವಯ ದಿನಾಂಕ 10-10-2008ರಿಂದ ಅಮಾನತ್ತಿನಲ್ಲಿಡಲು ಪರಿಗಣಿಸಬಹುದೆಂದು ತಿಳಿಸಲಾಗಿದೆ.

ಈ ಪ್ರಕರಣವನ್ನು ಸರ್ಕಾರ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 63 ಕಾಮಾಸೇ 2008 (ಭಾಗ) ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಗಾಗಿ ಶ್ರೀ ಎಂ. ಗೋಪಾಲಪ್ಪ, ಸಹಾಯಕ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಆಲಿ ಆಸ್ಕರ್ ರಸ್ತೆ, ಬೆಂಗಳೂರು, ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಗಳು 1957ರ ನಿಯಮ 10(1)ರ ಕಲಂ (ಎ) ಮತ್ತು (ಬಿ)ನಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಸದರಿಯವರ ವಿರುದ್ಧದ ಲೋಕಾಯುಕ್ತ ಪ್ರಕರಣದ ವಿಚಾರಣೆಯನ್ನು ಬಾಕಿ ಇರಿಸಿ, ದಿನಾಂಕ 10-10-2008ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಶ್ರೀ ಎಂ. ಗೋಪಾಲಪ್ಪ, ಇವರು ಅಮಾನತ್ತಿನ ಅವಧಿಯಲ್ಲಿ ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೇ ಕೇಂದ್ರ ಸ್ಥಾನ ಬಿಡುವಂತಿಲ್ಲ.

ಶ್ರೀ ಎಂ. ಗೋಪಾಲಪ್ಪ, ಇವರು ಅಮಾನತ್ತಿನ ಅವಧಿಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 98ರ ಅನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.132

**ಕೆ. ಭವಾನಿ**

ಪೀಠಾಧಿಕಾರಿ (ಪ್ರ), ಆಹಾರ-1 ಶಾಖೆ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ
ವ್ಯವಹಾರಗಳ ಇಲಾಖೆ

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** 2008-09ನೇ ಸಾಲಿಗೆ ಕೆಬಿಟ್ಸ್ ಸಂಸ್ಥೆಯ ಆಡಳಿತ ನಿರ್ವಹಣೆಗಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 24 ಆಡವಿ 2008, ದಿನಾಂಕ 12-6-2008.
2. ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 74 ಆಡವಿ 2007, ದಿನಾಂಕ 31-7-2008.
3. ನಿರ್ದೇಶಕರು, ಮಾತಂ ಮತ್ತು ಜೈತಂ ನಿರ್ದೇಶನಾಲಯರವರ ಪತ್ರ ಸಂಖ್ಯೆ: ಮಾತಂನಿ/ಲೆಕ್ಕ-1/16/ ಕೆಬಿಟ್ಸ್ ಅನುದಾನ 613/08-09, ದಿ: 27-11-2008.

**ಪ್ರಸ್ತಾವನೆ :**

2008-09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3451-00-090-2-01 ಮಾಹಿತಿ ತಂತ್ರಜ್ಞಾನ-ಉನ್ನತೀಕರಣ ಮತ್ತು ಅಭಿವೃದ್ಧಿ 059 ಇತರೆ ಖರ್ಚು (ಯೋಜನೆ)" ರಡಿಯಲ್ಲಿ ರೂ. 600.00 ಲಕ್ಷಗಳ ಅನುದಾನವು

ಒದಗಣೆಯಾಗಿದ್ದು, ಅದರಲ್ಲಿ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು (ಕೆಬಿಟ್ಸ್) ಸಂಸ್ಥೆಯ ಆಡಳಿತ ನಿರ್ವಹಣೆಗಾಗಿ ರೂ. 72.00 ಲಕ್ಷ (ರೂ. ಎಪ್ಪತ್ತೆರಡು ಲಕ್ಷಗಳು ಮಾತ್ರ) ಗಳ ಅನುದಾನವನ್ನು ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಂಚಿಕೆ ಮಾಡಲಾಗಿದೆ.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ಮೇಲೆ (3)ರಲ್ಲಿ ಓದಲಾದ ದಿನಾಂಕ 27–11–2008ರ ಪತ್ರದಲ್ಲಿ ಕೆಬಿಟ್ಸ್ ಸಂಸ್ಥೆಯ ಆಡಳಿತ ನಿರ್ವಹಣೆಗಾಗಿ ಮೇಲೆ (1)ರಲ್ಲಿನ ಸರ್ಕಾರಿ ಆದೇಶದಲ್ಲಿ ಹಂಚಿಕೆಯಾಗಿರುವ ರೂ. 72.00 ಲಕ್ಷಗಳಲ್ಲಿ ಕೆಬಿಟ್ಸ್ ಸಂಸ್ಥೆಯ ಆಡಳಿತ ವೆಚ್ಚಕ್ಕಾಗಿ ಎರಡನೆಯ ಕಂತಾಗಿ ರೂ. 37.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಉಲ್ಲೇಖ (2)ರ ಸರ್ಕಾರಿ ಆದೇಶದಲ್ಲಿ ರೂ. 35.00 ಲಕ್ಷಗಳ ಅನುದಾನವನ್ನು ಮೊದಲನೆಯ ಕಂತಾಗಿ ಬಿಡುಗಡೆ ಮಾಡಲಾಗಿದ್ದು, ಪ್ರಸ್ತುತ ರೂ. 37.00 ಲಕ್ಷಗಳ ಅನುದಾನವನ್ನು ಎರಡನೆಯ ಕಂತಾಗಿ ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 74 ಅಡವಿ 2007, ಬೆಂಗಳೂರು, ದಿನಾಂಕ: 22ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, 2008–09ನೇ ಸಾಲಿಗೆ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು (ಕೆಬಿಟ್ಸ್) ಸಂಸ್ಥೆಯ ಆಡಳಿತ ನಿರ್ವಹಣೆಗಾಗಿ ಎರಡನೆಯ ಕಂತಿನ ಅನುದಾನವಾಗಿ ರೂ. 37.00 ಲಕ್ಷಗಳ (ರೂ. ಮೂವತ್ತೇಳು ಲಕ್ಷಗಳು ಮಾತ್ರ) ಅನುದಾನವನ್ನು ನೀಡುವ ಸಲುವಾಗಿ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ '3451–00–090–2–01 ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ–059–ಇತರೆ ವೆಚ್ಚ (ಯೋಜನೆ)' ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು (ಕೆಬಿಟ್ಸ್) ಸಂಸ್ಥೆಯ ಅಪರ ವ್ಯವಸ್ಥಾಪಕ ನಿರ್ದೇಶಕರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–5–2008 ಇದರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.135

**ಎಂ.ವಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ
ಮತ್ತು ತಂತ್ರಜ್ಞಾನ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ರಾಮನಗರ ರೈಲು ನಿಲ್ದಾಣದ ಬಳಿ ಇರುವ ಎಲ್.ಸಿ.ಸಂ. 36–37ರ ಬದಲಿಗೆ ರಸ್ತೆ ಕೆಳಸೇತುವೆಗೆ ಕೂಡು ರಸ್ತೆಯ ನಿರ್ಮಿಸುವ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆ ಹಾಗೂ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1. ದಿನಾಂಕ 3–11–06 ಆದೇಶ ಸಂ. ಮೂಅಇ 52 ರಾರಾಹೆ 04
2. ದಿನಾಂಕ 14–5–07 ಸಂ. CE/C&B (South)/Rly-appro/RUB/RNM/AE-5/06-07ರ ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡ, ಲೋಕೋಪಯೋಗಿ ಇಲಾಖೆ (ದ) ಬೆಂಗಳೂರು ರವರ ಪತ್ರ.

3. ದಿನಾಂಕ 5–7–07 ಆದೇಶ ಸಂ. ಮೂಅಇ 56 ರಾರಾಹೆ 07
4. ದಿನಾಂಕ 26–5–08 ಸಂ. ಸಂಕದ/ಸೇಶಾಬೆಂ/ಆರ್.ಯು.ಬಿ./ರಾಮನಗರ/ಎಲ್.ಸಿ.36–37/08–09ರ ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡ, ಲೋಕೋಪಯೋಗಿ ಇಲಾಖೆ (ದ) ಬೆಂಗಳೂರು ರವರ ಪತ್ರ.

**ಪ್ರಸ್ತಾವನೆ :**

ರಾಮನಗರ ರೈಲು ನಿಲ್ದಾಣದ ಬಳಿ ಎಲ್.ಸಿ. ಸಂ. 36–37ರ ಬದಲಿಗೆ ರಸ್ತೆ ಕೆಳಸೇತುವೆಗೆ ಕೂಡು ರಸ್ತೆ ನಿರ್ಮಿಸುವ ಕಾಮಗಾರಿಯನ್ನು ಲೋಕೋಪಯೋಗಿ ಇಲಾಖೆಗೆ ವಹಿಸಿ ರೂ. 1.00 ಕೋಟಿಯನ್ನು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಐಡೆಕ್‌ಗೆ ಬಿಡುಗಡೆ ಮಾಡಿ ಇದನ್ನು ಮುಖ್ಯ ಅಭಿಯಂತರರು ಲೋಕೋಪಯೋಗಿ ಇಲಾಖೆ ಇವರಿಗೆ ವಿತರಿಸಲು ನಿರ್ದೇಶಿಸಲಾಗಿದ್ದಿತು.

2. ಮೇಲೆ ಓದಲಾದ (2)ರ ಲೋಕೋಪಯೋಗಿ ಇಲಾಖೆಯ ಮುಖ್ಯ ಇಂಜಿನಿಯರ್‌ರವರ ಪತ್ರದಲ್ಲಿ ದಿನಾಂಕ 3–11–06ರ ಸರ್ಕಾರಿ ಆದೇಶದಲ್ಲಿ ಬಿಡುಗಡೆ ಮಾಡಿರುವ ರೂ. 1.00 ಕೋಟಿಯನ್ನು ಐಡೆಕ್ ಖಜಾನೆಯಿಂದ ಸೆಳೆದು ಲೋಕೋಪಯೋಗಿ ಇಲಾಖೆಗೆ ಕೂಡಲೇ ವಿತರಿಸಲು ಅಗತ್ಯ ಸೂಚನೆ ನೀಡುವಂತೆ ಕೋರಲಾಗಿತ್ತು.

3. ಸದರಿ ಕಾಮಗಾರಿಗೆ 2006–07ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಮೊತ್ತವನ್ನು ಐಡೆಕ್ ಡ್ರಾ ಮಾಡಿ ಲೋಕೋಪಯೋಗಿ ಇಲಾಖೆಗೆ ವಿತರಿಸಲು ಕ್ರಮವಹಿಸದೇ ಇದ್ದುದರಿಂದ ಈ ಹಣ ಬಿಡುಗಡೆಗೊಳ್ಳದೆ ವ್ಯರ್ಥವಾಗಿರುತ್ತದೆ. ಇದನ್ನು ಪರಿಗಣಿಸಿ ಮೇಲೆ ಓದಲಾದ (3)ರ ಸರ್ಕಾರಿ ಆದೇಶದಲ್ಲಿ ಪುನಃ ರೂ. 1.00 ಕೋಟಿಯನ್ನು ಲೋಕೋಪಯೋಗಿ ಇಲಾಖೆಗೆ ಬಿಡುಗಡೆ ಮಾಡಿದೆ.

4. ಮೇಲ್ಕಾಣಿಸಿದ ರಸ್ತೆ ಕೆಳಸೇತುವೆ ಮತ್ತು ಕೂಡುರಸ್ತೆಯನ್ನು ಒಟ್ಟು ರೂ. 473.00 ಲಕ್ಷಗಳ ಅಂದಾಜಿನಲ್ಲಿ ರೈಲ್ವೆ ಇಲಾಖೆಯವರೇ ಅನುಷ್ಠಾನಗೊಳಿಸಲು ಈ ಮುಂಚೆ ತೀರ್ಮಾನಿಸಲಾಗಿತ್ತು. ಇದರಲ್ಲಿ ರೈಲ್ವೆ ಇಲಾಖೆಯವರು ರೂ. 231.61 ಲಕ್ಷ ಮತ್ತು ರಾಜ್ಯ ಸರ್ಕಾರ ರೂ. 241.60 ಲಕ್ಷಗಳನ್ನು ಭರಿಸಲು ಯೋಜಿಸಲಾಗಿತ್ತು. ಭೂಸ್ವಾಧೀನದಲ್ಲಿ ಉಂಟಾದ ವಿಳಂಬ ಮತ್ತು ಇನ್ನಿತರ ಅನಿಶ್ಚಿತ ಕಾರಣಗಳಿಂದ ಕೂಡು ರಸ್ತೆ ಕಾಮಗಾರಿಯನ್ನು ರೈಲ್ವೆಯವರ ಬದಲಿಗೆ ಲೋಕೋಪಯೋಗಿ ಇಲಾಖೆವತಿಯಿಂದಲೇ ಕೈಗೊಳ್ಳಲು ತೀರ್ಮಾನಿಸಲಾಯಿತು. 2000–01ರ ಸಾಲಿನ ದರಪಟ್ಟಿಯ ಪ್ರಕಾರ ತಯಾರಿಸಿದ ರಸ್ತೆ ಕೆಳಸೇತುವೆ ಮತ್ತು ಕೂಡು ರಸ್ತೆಯ ರೂ. 473.00 ಲಕ್ಷಗಳ ಅಂದಾಜು ಪಟ್ಟಿಯಲ್ಲಿ ಕೂಡು ರಸ್ತೆ ನಿರ್ಮಾಣಕ್ಕಾಗಿ ರೂ. 207.00 ಲಕ್ಷಗಳನ್ನು ಮೀಸಲಿರಿಸಲಾಗಿತ್ತು.

5. ಕೂಡು ರಸ್ತೆಯ ಕಾಮಗಾರಿಯನ್ನು ಲೊಕೋಪಯೋಗಿ ಇಲಾಖೆಯ ವತಿಯಿಂದ ಕೈಗೊಳ್ಳಲು ತೀರ್ಮಾನಿಸಿ ಪರಿಷ್ಕೃತ ಅಂದಾಜು ಪಟ್ಟಿಯನ್ನು ರೂ.450 ಲಕ್ಷಗಳಿಗೆ ಮೆ.ಸೀಕಾನ್ ಲಿಮಿಟೆಡ್‌ರವರಿಂದ ಸಿದ್ಧಪಡಿಸಿದೆ. ಈ ಕಾಮಗಾರಿಗಾಗಿ 2007–08ನೇ ಸಾಲಿನಲ್ಲಿ ಟೆಂಡರ್ ಕರೆದಾಗ ಸ್ವೀಕೃತವಾಗಿರುವ ಟೆಂಡರ್ ಮೊತ್ತ ರೂ. 5,84,83,279/–ಗಳಾಗಿರುತ್ತದೆ. ಈ ಕಾಮಗಾರಿಯನ್ನು ರೂ. 5,72,89,960.25ಗಳಿಗೆ ಗುತ್ತಿಗೆದಾರರು ನಿರ್ವಹಿಸಲು ಸಿದ್ದವಿರುವುದಾಗಿ ಲೋಕೋಪಯೋಗಿ ಇಲಾಖೆಯು ತಿಳಿಸಿರುವುದರಿಂದ ಈ ಮೊತ್ತದ ವ್ಯತ್ಯಾಸವು 2001ರಲ್ಲಿ ತಯಾರಿಸಿರುವ ಅಂದಾಜಿಗಿಂತ ಹೆಚ್ಚಾಗಿದ್ದು ಈಗ ಸದರಿ ಕಾಮಗಾರಿಗೆ ತಗಲುವ ಒಟ್ಟು ರೂ. 5,72,89,960/– ಗಳಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡುವಂತೆ ಹಾಗೂ ಸೂಕ್ತ ಅನುದಾನವನ್ನು ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್‌ರವರು ಲೋಕೋಪಯೋಗಿ ಇಲಾಖೆ, ಮೇಲೆ ಓದಲಾದ (4) ಪತ್ರದಲ್ಲಿ ಕೋರಿದ್ದಾರೆ.

6. ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 56 ರಾರಾಹೆ 2007, ಬೆಂಗಳೂರು, ದಿನಾಂಕ: 22ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಮನಗರ ರೈಲ್ವೆ ನಿಲ್ದಾಣದ ಬಳಿ ಇರುವ ಎಲ್.ಸಿ. ನಂ. 36 ಮತ್ತು 37ರ ಬದಲಾಗಿ ನಿರ್ಮಿಸಿರುವ ರಸ್ತೆ ಕೆಳ ಸೇತುವೆಗೆ ಕೂಡು ರಸ್ತೆ ನಿರ್ಮಿಸಲು ತಗಲುವ ಪರಿಷ್ಕೃತ ಅಂದಾಜು ವೆಚ್ಚ ರೂ. 5,72,89,960/– ಗಳನ್ನು ರೈಲ್ವೆ ಹಾಗೂ ರಾಜ್ಯ ಸರ್ಕಾರವು ಶೇಕಡಾ 50:50 ದರದಲ್ಲಿ ಭರಿಸುವ ಷರತ್ತಿಗೊಳಪಟ್ಟು ಇದಕ್ಕೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ. ಈ ಕಾಮಗಾರಿಗೆ ತಗಲುವ ಶೇ. 50 ರಷ್ಟು ರಾಜ್ಯ ಸರ್ಕಾರದ ಪಾಲು ರೂ. 2,86,44,480/–ಗಳ ಮೊತ್ತವನ್ನು 2008–09ನೇ ಸಾಲಿನ ಆಯವ್ಯಯದಲ್ಲಿ ಒದಗಣೆ

ಮಾಡಿರುವ ಲೆಕ್ಕ ಶೀರ್ಷಿಕೆ "5465–01–190–3–04–(ಯೋಜನೆ)–211 ಬಂಡವಾಳ" ಇದರ ಅಡಿಯಲ್ಲಿ ಬಿಡುಗಡೆ ಮಾಡಲಾಗಿದೆ.

2. ಈ ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ರಾಮನಗರ ವಿಭಾಗ ಇವರು ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಸರ್ಕಾರದ ಅಧೀನ ಕಾರ್ಯದರ್ಶಿಯವರ ಮೇಲು ರುಜುವಿನೊಂದಿಗೆ ಪೇಯಿಸ್ ರಸೀತಿಯ ಮೂಲಕ ಡ್ರಾ ಮಾಡಿ ರಸ್ತೆ ಕೆಳ ಸೇತುವೆಯ ಕೂಡುರಸ್ತೆ ನಿರ್ಮಾಣದ ವೆಚ್ಚ ಭರಿಸತಕ್ಕದ್ದು.

3. ಆ ಆದೇಶವನ್ನು ದಿನಾಂಕ 29–11–08ರ ಹಿಂಬರಹ ಸಂ: FD 1351 Exp-1/08 ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.136

**ಎನ್. ಮಂಜುಳಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಎಸ್.ಪಿ. ರಾಜು, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಹೊಸಪೇಟೆ (ಅಮಾನತ್ತು), ಇವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಬಾಕಿ ಇಟ್ಟು ಅಮಾನತ್ತಿನಿಂದ ತೆರವುಗೊಳಿಸುವ ಕುರಿತು.

**ಓದಲಾಗಿದೆ:**

1. ಆಯುಕ್ತರು ಮತ್ತು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರ ಪತ್ರ ಸಂಖ್ಯೆ: ಗಭೂಇ: ಸಿಬ್ಬಂದಿ.ಅ.3:2007–08:3019, ದಿನಾಂಕ 11–2–2008.
2. ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ, ಬಳ್ಳಾರಿ ಇವರ ಪತ್ರ ಸಂಖ್ಯೆ: ಕಂ: ಗಣಿ: 111:2007–08, ದಿನಾಂಕ 11–2–2008.
3. ಸರ್ಕಾರದ ಆದೇಶ ದಿನಾಂಕ ಸಿಐ 08 ಎಂಜಿಎಸ್ 2007, ದಿ: 23–2–2008.

**ಪ್ರಸ್ತಾವನೆ :**

ಶ್ರೀ ಎಸ್.ಪಿ. ರಾಜು, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಹೊಸಪೇಟೆ ಇವರು ಸಕಾಲದಲ್ಲಿ ಟಾಸ್ಕ್‌ಫೋರ್ಸ್ ಸಮಿತಿಯ ಸಭೆಗಳನ್ನು ಏರ್ಪಡಿಸಲು ಆಸಕ್ತಿ ತೋರುತ್ತಿಲ್ಲವೆಂದೂ, ಟಾಸ್ಕ್‌ಫೋರ್ಸ್ ಸಮಿತಿಯು ಸೂಚಿಸಿದಂತಹ ಆದೇಶಗಳನ್ನು ಪಾಲಿಸುತ್ತಿಲ್ಲವೆಂದೂ, ಜಿಲ್ಲೆಯಲ್ಲಿ ಅಕ್ರಮ ಗಣಿಗಾರಿಕೆಯನ್ನು ತಡೆಗಟ್ಟಲು ಸಂಪೂರ್ಣವಾಗಿ ವಿಫಲರಾಗಿರುತ್ತಾರೆಂದೂ ಹಾಗೂ ಇನ್ನಿತರೆ ಕರ್ತವ್ಯ ಲೋಪಗಳನ್ನು ಎಸಗಿರುವುದರಿಂದ, ಇವರ ವಿರುದ್ಧ ನಿಯಮಾನುಸಾರ ಶಿಸ್ತಿನ ಕ್ರಮವನ್ನು ತೆಗೆದುಕೊಳ್ಳುವಂತೆ ಜಿಲ್ಲಾಧಿಕಾರಿ, ಬಳ್ಳಾರಿ ಇವರು ಕೋರಿರುವ ಮೇರೆಗೆ ಹಾಗೂ ಉಲ್ಲೇಖ (1) ಮತ್ತು (2)ರ ಪತ್ರದಲ್ಲಿ ಆಯುಕ್ತರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರ ಶಿಫಾರಸ್ಸಿನ ಮೇರೆಗೆ, ಉಲ್ಲೇಖ (3)ರ ಸರ್ಕಾರದ ಆದೇಶ ದಿನಾಂಕ 23–2–2008ರಲ್ಲಿ ಶ್ರೀ ಎಸ್.ಪಿ. ರಾಜು, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಹೊಸಪೇಟೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತುಗೊಳಿಸಿ, ಆದೇಶಿಸಲಾಗಿತ್ತು.

ಮುಂದುವರೆದು, ಸರ್ಕಾರದ ಕಾರಣ ಕೇಳುವ ನೋಟೀಸು ದಿನಾಂಕ 4–11–2008ರಲ್ಲಿ ಶ್ರೀ ಎಸ್.ಪಿ. ರಾಜು, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಹೊಸಪೇಟೆ (ಅಮಾನತ್ತು), ಇವರಿಗೆ ನಿಯಮಾವಳಿಯನುಸಾರ ಆರೋಪ ಪಟ್ಟಿ 1–4ರವರೆಗೆ ಜಾರಿ ಮಾಡಿದ್ದು ಹಾಗೂ 15 ದಿನಗಳ ಕಾಲಾವಕಾಶ ಕೊಟ್ಟು ಅವರ ಹೇಳಿಕೆ ಏನಾದರೂ ಇದ್ದಲ್ಲಿ ಸರ್ಕಾರಕ್ಕೆ ತಿಳಿಸುವಂತೆ ಸೂಚಿಸಲಾಗಿತ್ತು. ಈವರೆವಿಗೆ ಸದರಿ ಅಧಿಕಾರಿಯವರಿಂದ ಲಿಖಿತ ಹೇಳಿಕೆ ಸ್ವೀಕೃತವಾಗಿರುವುದಿಲ್ಲ. ನಂತರ, ಸದರಿ ಅಮಾನತ್ತಿನಲ್ಲಿರತಕ್ಕಂತ ಅಧಿಕಾರಿಯವರು ದಿನಾಂಕ 22–11–2008ರಂದು ಮನವಿ ಸಲ್ಲಿಸಿ ಅಮಾನತ್ತಿನ ಅವಧಿ 6 ತಿಂಗಳಿಗಿಂತ ಮೀರಿರುವುದರಿಂದ ತಮ್ಮ ಅಮಾನತ್ತಿನ ವಿಚಾರಣೆಯನ್ನು ಬಾಕಿ ಇರಿಸಿ ಸ್ಥಳ ನಿಯುಕ್ತಿಗೊಳಿಸುವಂತೆ ಕೋರಿರುತ್ತಾರೆ. ಈ ಬಗ್ಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಆರ್.13/ ಎಸ್‌ಡಿಇ/89, ದಿನಾಂಕ 3–7–1985 ರಡಿಯಲ್ಲಿ ಪರಿಶೀಲಿಸಲಾಗಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಸರ್ಕಾರದಲ್ಲಿ ಪರಿಶೀಲಿಸಿ ಸದರಿ ಅಧಿಕಾರಿಯವರ ಅಮಾನತ್ತನ್ನು ತೆರವು ಮಾಡಲು ತೀರ್ಮಾನಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 08 ಎಂಜಿಎಸ್ 2008, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ವಾಸ್ತವಾಂಶಗಳ ಮೇರೆಗೆ ಶ್ರೀ ಎಸ್.ಪಿ. ರಾಜು, ಉಪ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಹೊಸಪೇಟೆ (ಅಮಾನತ್ತು) ಇವರ ವಿರುದ್ಧದ ಆರೋಪಗಳ ಕುರಿತು ವಿಚಾರಣೆಯನ್ನು ಕಾಯ್ದಿರಿಸಿ, ಅಮಾನತ್ತನ್ನು ತೆರವುಗೊಳಿಸಲಾಗಿದೆ.

ಅಮಾನತ್ತು ತೆರವುಗೊಳಿಸಿದ ನಂತರ, ಶ್ರೀ ಎಸ್.ಪಿ. ರಾಜು, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಹೊಸಪೇಟೆ, ಇವರನ್ನು ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಕೇಂದ್ರ ಕಛೇರಿಯಲ್ಲಿ ಹಾಲಿ ಖಾಲಿ ಇರುವ (Plan Monitoring Unit) ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.138

**ಎ.ಪಿ. ರಾಮಕೃಷ್ಣ**
ಪೀಠಾಧಿಕಾರಿ (ಗಣಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಇಂಧನ ಸಚಿವಾಲಯ

**ವಿಷಯ:** ಮೆ:: ಸುಪರ್ ವಿಂಡ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ (ಫೇಸ್–3), ಬೆಂಗಳೂರು ಕಂಪನಿಗೆ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಂಇ 26 ಎನ್‌ಸಿಇ 1999 ದಿನಾಂಕ: 13.5.1999.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 80 ಎನ್‌ಸಿಇ 2005 ದಿನಾಂಕ: 18.3.2005.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 61 ಎನ್‌ಸಿಇ 2005 ದಿನಾಂಕ: 13.4.2005.
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 92 ಎನ್‌ಸಿಇ 2005 ದಿನಾಂಕ: 13.4.2005.
5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 277 ಎನ್‌ಸಿಇ 2007 ದಿನಾಂಕ: 21.8.2007.
6) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿಎಲ್/08/ಎಸ್‌ಡಬ್ಲ್ಯುಪಿಪಿಎಲ್(ಪಿ–111) ಎಸ್‌ಇಎಲ್/2008/1593 ದಿನಾಂಕ: 24/26.9.2008.
7) ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ: ಮುವಿಪ/ಉಮುವಿಪ/29945/ 08–09 ದಿನಾಂಕ: 25.11.2008.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (2), (3) ಮತ್ತು (4) ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಗದಗ ಜಿಲ್ಲೆಯ ಕಪಟ್ಟಗುಡ್ಡ ಪವನ ವಲಯದಲ್ಲಿ 176.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ 176.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 165.75 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಸೀಮಿತಗೊಳಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಅನುಷ್ಠಾನ ಮಾಡಲು ಅನುಮತಿಸಲಾದ 165.75 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದಲ್ಲಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಸುಪರ್ ವಿಂಡ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ (ಫೇಸ್–3),

ಬೆಂಗಳೂರು ಕಂಪನಿಗೆ ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಜಲವದ್ಗಿ ಗ್ರಾಮದಲ್ಲಿ ಅನುಷ್ಠಾನ ಮಾಡಲು ವರ್ಗಾವಣೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆ ಬಗ್ಗೆ ಪರಿಶೀಲಿಸಿ ಅಭಿಪ್ರಾಯ ನೀಡುವಂತೆ ಮುಖ್ಯ ವಿದ್ಯುತ್ ಪರಿವೀಕ್ಷಕರನ್ನು ಕೋರಲಾಗಿತ್ತು. ಅದರಂತೆ ಮೇಲೆ ಕ್ರಮ ಸಂಖ್ಯೆ (7) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು ಧಾರವಾಡ ಜಿಲ್ಲೆಯ ವಿದ್ಯುತ್ ಪರಿವೀಕ್ಷಕರು ದಿನಾಂಕ: 20.11.2008 ರಂದು ಯೋಜನಾ ಸ್ಥಳವನ್ನು ಪರಿವೀಕ್ಷಿಸಿ ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಯವರು ವಿದ್ಯುತ್ ಕಾಮಗಾರಿಯನ್ನು ಮಾಡುತ್ತಿರುವರೆಂದು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಇವರಿಂದ ಪವರ್ ಎವಾಕ್ಯುಯೇಷನ್‌ಗೆ ಅನುಮತಿ ಪಡೆದು, 33 ಕೆ.ವಿ. ವಿದ್ಯುತ್ ಮಾರ್ಗದ ಕಾಮಗಾರಿ, ಮೀಟರಿಂಗ್ ಸ್ಟೇಷನ್ ಕೆಲಸ, ವಿಂಡ್ ಮಿಲ್ ಟವರ್ ಕೆಲಸ ಮತ್ತು ಪವನ ವಿದ್ಯುತ್ ಜನಕ ಅಳವಡಿಸುವ ಕೆಲಸ ಪೂರ್ಣವಾಗಿದೆಯೆಂದು ಹಾಗೂ ವಿದ್ಯುತ್ ಪರಿವರ್ತಕದ ಕಾಮಗಾರಿ, ವಿದ್ಯುತ್ ಮಾಪಕ ಮತ್ತು ಕೇಬಲ್ ಅಳವಡಿಸುವ ಕೆಲಸ ಬಾಕಿ ಇದೆಯೆಂದು ತಿಳಿಸಿರುತ್ತಾರೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕುಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 316 ಎನ್‌ಸಿಇ 2008, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2008**.

ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಅನುಷ್ಠಾನ ಮಾಡಲು ಅನುಮತಿಸಲಾದ 165.75 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದಲ್ಲಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಸುಪರ್ ವಿಂಡ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ (ಫೇಸ್–3), ಬೆಂಗಳೂರು ಕಂಪನಿಗೆ ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಜಲವದ್ಗಿ ಗ್ರಾಮದಲ್ಲಿ ಅನುಷ್ಠಾನ ಮಾಡಲು ವರ್ಗಾವಣೆ ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 183

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

**ವಿಷಯ:** ಮೆ:: ಸುಪರ್ ವಿಂಡ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ (ಫೇಸ್–1), ಬೆಂಗಳೂರು ಕಂಪನಿಗೆ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಂಇ 26 ಎನ್‌ಸಿಇ 1999 ದಿನಾಂಕ: 13.5.1999.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 80 ಎನ್‌ಸಿಇ 2005 ದಿನಾಂಕ: 18.3.2005.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 61 ಎನ್‌ಸಿಇ 2005 ದಿನಾಂಕ: 13.4.2005.
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 92 ಎನ್‌ಸಿಇ 2005 ದಿನಾಂಕ: 13.4.2005.
5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 277 ಎನ್‌ಸಿಇ 2007 ದಿನಾಂಕ: 21.8.2007.
6) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿಎಲ್/08/ಎಸ್‌ಡಬ್ಲ್ಯೂಪಿಪಿಎಲ್(ಪಿ–1) ಎಸ್‌ಇಎಲ್/ 2008/1591 ದಿನಾಂಕ: 24/26.9.2008.
7) ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ: ಮುವಿಪ/ಉಮುವಿಪ/29947/ 08–09 ದಿನಾಂಕ: 25.11.2008.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (2), (3) ಮತ್ತು (4) ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಗದಗ ಜಿಲ್ಲೆಯ ಕಪ್ಪಟಗುಡ್ಡ ಪವನ ವಲಯದಲ್ಲಿ 176.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ 176.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 165.75 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಸೀಮಿತಗೊಳಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಅನುಷ್ಠಾನ ಮಾಡಲು ಅನುಮತಿಸಲಾದ 165.75 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದಲ್ಲಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಸುಪರ್ ವಿಂಡ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ (ಫೇಸ್–1), ಬೆಂಗಳೂರು ಕಂಪನಿಗೆ ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಜಲವದ್ಗಿ ಗ್ರಾಮದಲ್ಲಿ ಅನುಷ್ಠಾನ ಮಾಡಲು ವರ್ಗಾವಣೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆ ಬಗ್ಗೆ ಪರಿಶೀಲಿಸಿ ಅಭಿಪ್ರಾಯ ನೀಡುವಂತೆ ಮುಖ್ಯ ವಿದ್ಯುತ್ ಪರಿವೀಕ್ಷಕರನ್ನು ಕೋರಲಾಗಿತ್ತು. ಅದರಂತೆ ಮೇಲೆ ಕ್ರಮ ಸಂಖ್ಯೆ (7) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು ಧಾರವಾಡ ಜಿಲ್ಲೆಯ ವಿದ್ಯುತ್ ಪರಿವೀಕ್ಷಕರು ದಿನಾಂಕ: 20.11.2008 ರಂದು ಯೋಜನಾ ಸ್ಥಳವನ್ನು ಪರಿವೀಕ್ಷಿಸಿ ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಯವರು ವಿದ್ಯುತ್ ಕಾಮಗಾರಿಯನ್ನು ಮಾಡುತ್ತಿರುವರೆಂದು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಇವರಿಂದ ಪವರ್ ಎವಾಕ್ಯುಯೇಷನ್‌ಗೆ ಅನುಮತಿ ಪಡೆದು, 0.3 ಕಿ.ಮೀ. ಉದ್ದದ 33 ಕೆ.ವಿ. ವಿದ್ಯುತ್ ಮಾರ್ಗದ ಕಾಮಗಾರಿ ಸಂಪೂರ್ಣವಾಗಿದೆಯೆಂದು, ಮೀಟರಿಂಗ್ ಸ್ಟೇಷನ್ ಕೆಲಸ ಪೂರ್ಣ ಆಗಿದೆಯೆಂದು, ವಿಂಡ್ ಮಿಲ್ ಟವರ್ ಕೆಲಸ ಪ್ರಗತಿಯಲ್ಲಿದೆಯೆಂದು ಮತ್ತು ವಿದ್ಯುತ್ ಪರಿವರ್ತಕವನ್ನು ಅಳವಡಿಸುವ ಕೆಲಸ, ವಿದ್ಯುತ್ ಮಾಪಕ ಮತ್ತು ಕೇಬಲ್ ಅಳವಡಿಸುವ ಕೆಲಸ ಬಾಕಿ ಇದೆಯೆಂದು ತಿಳಿಸಿರುತ್ತಾರೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕುಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 313 ಎನ್‌ಸಿಇ 2008, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2008.**

ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಅನುಷ್ಠಾನ ಮಾಡಲು ಅನುಮತಿಸಲಾದ 165.75 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದಲ್ಲಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಸುಪರ್ ವಿಂಡ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ (ಫೇಸ್–1), ಬೆಂಗಳೂರು ಕಂಪನಿಗೆ ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಜಲವದ್ಗಿ ಗ್ರಾಮದಲ್ಲಿ ಅನುಷ್ಠಾನ ಮಾಡಲು ವರ್ಗಾವಣೆ ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.184

**ಎಸ್.ಜೆ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**ವಿಷಯ:** ಮೆ:: ಸುಪರ್ ವಿಂಡ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ (ಫೇಸ್–5), ಬೆಂಗಳೂರು ಕಂಪನಿಗೆ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಂಇ 26 ಎನ್‌ಸಿಇ 1999 ದಿನಾಂಕ: 13.5.1999.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 80 ಎನ್‌ಸಿಇ 2005 ದಿನಾಂಕ: 18.3.2005.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 61 ಎನ್‌ಸಿಇ 2005 ದಿನಾಂಕ: 13.4.2005.
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 92 ಎನ್‌ಸಿಇ 2005 ದಿನಾಂಕ: 13.4.2005.
5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 277 ಎನ್‌ಸಿಇ 2007 ದಿನಾಂಕ: 21.8.2007.

6) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿಎಲ್/08/ಎಸ್‌ಡಬ್ಲ್ಯುಪಿಪಿಎಲ್(ಪಿ–V) ಎಸ್‌ಇಎಲ್/2008/1595 ದಿನಾಂಕ: 24/26.9.2008.

7) ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ: ಮುವಿಪ/ಉಮುವಿಪ/29948/08–09 ದಿನಾಂಕ: 25.11.2008.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (2), (3) ಮತ್ತು (4) ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಗದಗ ಜಿಲ್ಲೆಯ ಕಪಟ್ಟಗುಡ್ಡ ಪವನ ವಲಯದಲ್ಲಿ 176.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ 176.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 165.75 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಸೀಮಿತಗೊಳಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಅನುಷ್ಠಾನ ಮಾಡಲು ಅನುಮತಿಸಲಾದ 165.75 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದಲ್ಲಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಸುಪರ್ ವಿಂಡ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ (ಫೇಸ್–5), ಬೆಂಗಳೂರು ಕಂಪನಿಗೆ ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಚಗಿನ್‌ಕೇರಿ ಗ್ರಾಮದಲ್ಲಿ ಅನುಷ್ಠಾನ ಮಾಡಲು ವರ್ಗಾವಣೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆ ಬಗ್ಗೆ ಪರಿಶೀಲಿಸಿ ಅಭಿಪ್ರಾಯ ನೀಡುವಂತೆ ಮುಖ್ಯ ವಿದ್ಯುತ್ ಪರಿವೀಕ್ಷಕರನ್ನು ಕೋರಲಾಗಿತ್ತು. ಅದರಂತೆ ಮೇಲೆ ಕ್ರಮ ಸಂಖ್ಯೆ (7) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು ಧಾರವಾಡ ಜಿಲ್ಲೆಯ ವಿದ್ಯುತ್ ಪರಿವೀಕ್ಷಕರು ದಿನಾಂಕ: 20.11.2008 ರಂದು ಯೋಜನಾ ಸ್ಥಳವನ್ನು ಪರಿವೀಕ್ಷಿಸಿ ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಯವರು ವಿದ್ಯುತ್ ಕಾಮಗಾರಿಯನ್ನು ಮಾಡುತ್ತಿರುವರೆಂದು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಇವರಿಂದ ಪವರ್ ಎವಾಕ್ಯುಯೇಷನ್‌ಗೆ ಅನುಮತಿ ಪಡೆದಿರುವರೆಂದು, ವಿದ್ಯುತ್ ಕಾಮಗಾರಿಯನ್ನು ಸಂಪೂರ್ಣವಾಗಿದೆಯೆಂದು ತಿಳಿಸಿರುತ್ತಾರೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕುಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 317 ಎನ್‌ಸಿಇ 2008, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2008.**

ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಅನುಷ್ಠಾನ ಮಾಡಲು ಅನುಮತಿಸಲಾದ 165.75 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದಲ್ಲಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಸುಪರ್ ವಿಂಡ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ (ಫೇಸ್–5), ಬೆಂಗಳೂರು ಕಂಪನಿಗೆ ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಚಗಿನ್‌ಕೇರಿ ಗ್ರಾಮದಲ್ಲಿ ಅನುಷ್ಠಾನ ಮಾಡಲು ವರ್ಗಾವಣೆ ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 186

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

**ವಿಷಯ:** ಮೆ:: ಸಿಮ್ರಾನ್ ವಿಂಡ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ (ಫೇಸ್–3), ಬೆಂಗಳೂರು ಕಂಪನಿಗೆ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಂಇ 98 ಎನ್‌ಸಿಇ 2000 ದಿನಾಂಕ: 10.7.2000.
2) ಸರ್ಕಾರಿ ಆದೇಶ ಸಂಖ್ಯೆ: ಡಿಇ 137 ಎನ್‌ಸಿಇ 2001 ದಿನಾಂಕ: 19.9.2001.
3) ಸರ್ಕಾರಿ ಆದೇಶ ಸಂಖ್ಯೆ: ಡಿಇ 325 ಎನ್‌ಸಿಇ 2002 ದಿನಾಂಕ: 21.12.2002.
4) ಸರ್ಕಾರಿ ಆದೇಶ ಸಂಖ್ಯೆ: ಡಿಇ 314 ಎನ್‌ಸಿಇ 2004 ದಿನಾಂಕ: 9.9.2004.
5) ಸರ್ಕಾರಿ ಆದೇಶ ಸಂಖ್ಯೆ: ಡಿಇ 346 ಎನ್‌ಸಿಇ 2004 ದಿನಾಂಕ: 9.11.2004.
6) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿಎಲ್/08/ಎಸ್‌ಡಬ್ಲ್ಯುಪಿಪಿಎಲ್(ಪಿ–3) ಎಲ್ಲುಕ್ಕರ್ನಹಳ್ಳಿ/2008/1574 ದಿನಾಂಕ: 24/26.9.2008.
7) ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ: ಮುವಿಪ/ಉಮುವಿಪ/ವಿಪ(ತಾ)/ಕ–ಪವನ/30708/08–09 ದಿನಾಂಕ: 2.12.2008.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1), (2), (3) ಮತ್ತು (4) ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿ ಒಟ್ಟು 171.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 37.50 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಚಿತ್ರದುರ್ಗ ಜಿಲ್ಲೆಯ ಜೋಗಿಮಟ್ಟಿಯಲ್ಲಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಅನುಷ್ಠಾನ ಮಾಡಲು ಅನುಮತಿಸಲಾದ 58.75 ಮೆಗಾ ವ್ಯಾಟ್ ಸಾಮರ್ಥ್ಯದ ಅಂಶಿಕ ಸಾಮರ್ಥ್ಯವಾದ 37.5 ಮೆಗಾ ವ್ಯಾಟ್ ಸಾಮರ್ಥ್ಯದಲ್ಲಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಸಿಮ್ರಾನ್ ವಿಂಡ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ (ಫೇಸ್–3), ಬೆಂಗಳೂರು ಕಂಪನಿಗೆ ಚಿತ್ರದುರ್ಗ ಜಿಲ್ಲೆಯ, ಚಿತ್ರದುರ್ಗ ತಾಲೂಕಿನ ಚಿಕ್ಕಸಿದ್ದವನಹಳ್ಳಿ ಗ್ರಾಮದಲ್ಲಿ ಅನುಷ್ಠಾನ ಮಾಡಲು ವರ್ಗಾವಣೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆ ಬಗ್ಗೆ ಪರಿಶೀಲಿಸಿ ಅಭಿಪ್ರಾಯ ನೀಡುವಂತೆ ಮುಖ್ಯ ವಿದ್ಯುತ್ ಪರಿವೀಕ್ಷಕರನ್ನು ಕೋರಲಾಗಿತ್ತು. ಅದರಂತೆ ಮೇಲೆ ಕ್ರಮ ಸಂಖ್ಯೆ (7) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು ಧಾರವಾಡ ಜಿಲ್ಲೆಯ ವಿದ್ಯುತ್ ಪರಿವೀಕ್ಷಕರು ದಿನಾಂಕ: 28.11.2008 ರಂದು ಯೋಜನಾ ಸ್ಥಳವನ್ನು ಪರಿವೀಕ್ಷಿಸಿ ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಯವರು ವಿದ್ಯುತ್ ಕಾಮಗಾರಿಯನ್ನು ಮಾಡುತ್ತಿರುವರೆಂದು, ವಿಂಡ್ ಮಿಲ್‌ಗೆ ಸಂಬಂಧಿಸಿದ ಟವರ್ ಅನ್ನು ನಿರ್ಮಿಸಿದ್ದು, ವಿದ್ಯುತ್ ಜನಕ ಅಳವಡಿಸುವ ಕಾರ್ಯ ಪ್ರಗತಿಯಲ್ಲಿದೆಯೆಂದು, 33 ಕೆ.ವಿ. ವಿದ್ಯುತ್ ಮಾರ್ಗದ ಎರಡು ಕಂಬಗಳನ್ನು ಅಳವಡಿಸುವ ಮತ್ತು ವಿದ್ಯುತ್ ಮಾರ್ಗ ನಿರ್ಮಿಸುವ ಕಾಮಗಾರಿ ಬಾಕಿ ಇದೆಯೆಂದು ತಿಳಿಸಿರುತ್ತಾರೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕುಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 310 ಎನ್‌ಸಿಇ 2008, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2008.**

ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಅನುಷ್ಠಾನ ಮಾಡಲು ಅನುಮತಿಸಲಾದ 58.75 ಮೆಗಾ ವ್ಯಾಟ್ ಸಾಮರ್ಥ್ಯದ ಅಂಶಿಕ ಸಾಮರ್ಥ್ಯವಾದ 37.5 ಮೆಗಾ ವ್ಯಾಟ್ ಸಾಮರ್ಥ್ಯದಲ್ಲಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಸಿಮ್ರಾನ್ ವಿಂಡ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ (ಫೇಸ್–3), ಬೆಂಗಳೂರು ಕಂಪನಿಗೆ ಚಿತ್ರದುರ್ಗ ಜಿಲ್ಲೆಯ, ಚಿತ್ರದುರ್ಗ ತಾಲೂಕಿನ ಚಿಕ್ಕಸಿದ್ದವನಹಳ್ಳಿ ಗ್ರಾಮದಲ್ಲಿ ಅನುಷ್ಠಾನ ಮಾಡಲು ವರ್ಗಾವಣೆ ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 182

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ,

**ವಿಷಯ:** ಮೆ:: ಸಿಮ್ರಾನ್ ವಿಂಡ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ (ಫೇಸ್–4), ಬೆಂಗಳೂರು ಕಂಪನಿಗೆ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಂಇ 98 ಎನ್‌ಸಿಇ 2000 ದಿನಾಂಕ: 10.7.2000.
2) ಸರ್ಕಾರಿ ಆದೇಶ ಸಂಖ್ಯೆ: ಡಿಇ 137 ಎನ್‌ಸಿಇ 2001 ದಿನಾಂಕ: 19.9.2001.
3) ಸರ್ಕಾರಿ ಆದೇಶ ಸಂಖ್ಯೆ: ಡಿಇ 325 ಎನ್‌ಸಿಇ 2002 ದಿನಾಂಕ: 21.12.2002.
4) ಸರ್ಕಾರಿ ಆದೇಶ ಸಂಖ್ಯೆ: ಡಿಇ 314 ಎನ್‌ಸಿಇ 2004 ದಿನಾಂಕ: 9.9.2004.
5) ಸರ್ಕಾರಿ ಆದೇಶ ಸಂಖ್ಯೆ: ಡಿಇ 346 ಎನ್‌ಸಿಇ 2004 ದಿನಾಂಕ: 9.11.2004.
6) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿಎಲ್/08/ಎಸ್‌ಡಬ್ಲ್ಯುಪಿಪಿಎಲ್(ಪಿ–4) ಎಲ್ಲುರ್ನಹಳ್ಳಿ/2008/ 1575 ದಿನಾಂಕ: 24/26.9.2008.
7) ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ: ಮುವಿಪ/ಉಮುವಿಪ/29946/ 08–09 ದಿನಾಂಕ: 25.11.2008.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1), (2), (3) ಮತ್ತು (4) ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿ ಒಟ್ಟು 171.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 37.50 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಚಿತ್ರದುರ್ಗ ಜಿಲ್ಲೆಯ ಜೋಗಿಮಟ್ಟಿಯಲ್ಲಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಅನುಷ್ಠಾನ ಮಾಡಲು ಅನುಮತಿಸಲಾದ 58.75 ಮೆಗಾ ವ್ಯಾಟ್ ಸಾಮರ್ಥ್ಯದ ಅಂಶಿಕ ಸಾಮರ್ಥ್ಯವಾದ 37.5 ಮೆಗಾ ವ್ಯಾಟ್ ಸಾಮರ್ಥ್ಯದಲ್ಲಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಸಿಮ್ರಾನ್ ವಿಂಡ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ (ಫೇಸ್–4), ಬೆಂಗಳೂರು ಕಂಪನಿಗೆ ಚಿತ್ರದುರ್ಗ ಜಿಲ್ಲೆಯ, ಚಿತ್ರದುರ್ಗ ತಾಲೂಕಿನ ಚಿಕ್ಕಸಿದ್ದವನಹಳ್ಳಿ ಗ್ರಾಮದಲ್ಲಿ ಅನುಷ್ಠಾನ ಮಾಡಲು ವರ್ಗಾವಣೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆ ಬಗ್ಗೆ ಪರಿಶೀಲಿಸಿ ಅಭಿಪ್ರಾಯ ನೀಡುವಂತೆ ಮುಖ್ಯ ವಿದ್ಯುತ್ ಪರಿವೀಕ್ಷಕರನ್ನು ಕೋರಲಾಗಿತ್ತು. ಅದರಂತೆ ಮೇಲೆ ಕ್ರಮ ಸಂಖ್ಯೆ (7) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು ಧಾರವಾಡ ಜಿಲ್ಲೆಯ ವಿದ್ಯುತ್ ಪರಿವೀಕ್ಷಕರು ದಿನಾಂಕ: 20.11.2008 ರಂದು ಯೋಜನಾ ಸ್ಥಳವನ್ನು ಪರಿವೀಕ್ಷಿಸಿ ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಯವರು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಇವರಿಂದ 52.5 ಮೆಗಾ ವ್ಯಾಟ್ ಪವರ್ ಎವಾಕ್ಯುಯೇಷನ್‌ಗೆ ಅನುಮತಿ ಪಡೆದಿರುವರೆಂದು, ಪವನ ವಿದ್ಯುತ್ ಸ್ಥಾವರದ ವಿಂಡ್ ಮಿಲ್‌ನ ಟವರ್ ಕಾಂಕ್ರೀಟ್ ಕೆಲಸ ಮುಗಿದಿದೆಯೆಂದು, ಟವರ್ ಕಡೆಗೆ ಬರುವ 33 ಕೆ.ವಿ. ವಿದ್ಯುತ್ ಮಾರ್ಗದಲ್ಲಿ ಒಂದು ಕಂಬವನ್ನು ನೆಟ್ಟು ಮೂರು ವಿದ್ಯುತ್

ತಂತಿಗಳನ್ನು ಎಳೆದಿರುವರೆಂದು, ಪರಿವರ್ತಕವನ್ನು ಅಳವಡಿಸಲು 2.5 ಮೀ. ಎತ್ತರದ ಕಟ್ಟಡವನ್ನು ನಿರ್ಮಿಸಿರುವರೆಂದು ತಿಳಿಸಿರುತ್ತಾರೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 311 ಎನ್‌ಸಿಇ 2008, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2008.**

ಮೆ:: ಸುಜ್ಲಾನ್ ಎನರ್ಜಿ ಲಿಮಿಟೆಡ್ ಕಂಪನಿಗೆ ಅನುಷ್ಠಾನ ಮಾಡಲು ಅನುಮತಿಸಲಾದ 58.75 ಮೆಗಾ ವ್ಯಾಟ್ ಸಾಮರ್ಥ್ಯದ ಅಂಶಿಕ ಸಾಮರ್ಥ್ಯವಾದ 37.5 ಮೆಗಾ ವ್ಯಾಟ್ ಸಾಮರ್ಥ್ಯದಲ್ಲಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಸಿಮ್ರಾನ್ ವಿಂಡ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ (ಫೇಸ್–4), ಬೆಂಗಳೂರು ಕಂಪನಿಗೆ ಚಿತ್ರದುರ್ಗ ಜಿಲ್ಲೆಯ, ಚಿತ್ರದುರ್ಗ ತಾಲೂಕಿನ ಚಿಕ್ಕಸಿದ್ದವನಹಳ್ಳಿ ಗ್ರಾಮದಲ್ಲಿ ಅನುಷ್ಠಾನ ಮಾಡಲು ವರ್ಗಾವಣೆ ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 185

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

## ENERGY SECRETARIAT

**Sub**: Enhancement of allotted capacity of Wind Power Project of Area-B from 2.00 MW to 15.00 MW in favour of M/s Sun Power India at Channenadaddi village in Chikodi Taluk, Belgaum District-reg.

**Read**:
1. Government Order No: EN 22 NCE 2006 dated: 20.4.2006.
2. Letter No: KRED/08/SP/2008/1904 dated: 11/13.11.2008 received from the Managing Director, Karnataka Renewable Energy Development Limited, Bangalore.

**PREAMBLE:**

In the Government order read at (1) above, sanction has been accorded for implementation of 5.00 MW capacity Wind Power Project at Channenadaddi, Jainapur, Chikkodi, Chinchani of Belgaum District to M/s Sun Power India.

After the assessment of wind potential and flow of the wind in the allotted site, the Managing Director, Karnataka Renewable Energy Development Limited, Bangalore in his letter read at (2) above, has recommended to Government to enhance the allotted wind power capacity of Area-B from 2.00 MW to 15.00 MW at Channenadaddi in Chikodi Taluk, Belgaum District in favour of M/s Sun Power India.

The proposal has been examined in detail and hence the following Order :

**Government Order No: EN 339 NCE 2008 Bangalore, Dated: 29th December 2008.**

Government is pleased to accord approval for enhancement of wind power capacity Area-B from 2.00 MW to 15.00 MW in favour of M/s Sun Power India as detailed below:

| Geographical Area Details | Sanctioned capacity | Enhancement agreed to | Total installable potential including enhancement |
|---|---|---|---|
| **Area-'B'-(2 MW):** A plateau with 764m peak is located on the North-West of Channenadaddi village and situated on the South-West of | 2.00 MW | 13.00 MW | 15.00 MW |

| | | | |
|---|---|---|---|
| Chikodi a distance about 3.5 km and is a non-Forest area. The proposed area is covered in the following Geographical co-ordinates:<br>**Latitude**: 16°23’33”- 16°24’31” N<br>**Longitude**: 74°33’0”- 74°33’50” E<br>**Ridge peaks:** 764m Amsl.<br>**Toposheet No: 47L/11** | | | |

The terms and conditions of the Government Order read at (1) above shall **IPSO FACTO** applicable.

By order and in the name of Governor of Karnataka,

P.R. 181

**S.J. SAMPATH KUMAR**

Under Secretary to Government,

Energy Department

**Sub:** Allotment of 3.00 MW Solar Photovoltaic Power Plant to Karnataka Power Corporation Limited, Bangalore–reg.

**Read:** 1) Ministry of New & Renewable Energy, Government Of India, New Delhi letter No: 32/61/2007-08/PVSE dated: 24.1.2008.

2) Letters No: KRED/07/SPVPP/08-09/973 dated: 18/23.6.2008 and KRED/ 07/ SPVPP/ 08-09/1055 dated: 2/4.7.2008 received from the Managing Director, Karnataka Renewable Energy Development Limited, Bangalore.

3) Proceedings of the Allotment Committee Meeting held on 25.10.2008.

**PREAMBLE:**

In the letter read at (1) above Ministry of New & Renewable Energy (MNRE) has issued guidelines for Demonstration Programme on Grid Interactive Solar Photovoltaic Power Generation. MNRE will provide subsidy of Rs. 12/- per Kwh of power generated through Solar Photovoltaic Power Plant and which is supplied to grid with minimum of 1.00 MW generation and maximum of 5.00 MW at a place. The developer has to approach Ministry of New & Renewable Energy through KREDL after acquisition of land for the project and entering into PPA with ESCOMs.

In the letters read at (2) above, the Managing Director, Karnataka Renewable Energy Development Limited, Bangalore has recommended for allotment of 3.00 MW capacity of Grid Connected Solar Photovoltaic Power Plant to Karnataka Power Corporation Limited, Bangalore at Yelahanka, Bangalore District.

The proposal was placed before the allotment committee meeting held on 25.10.2008 and the Committee recommended for allotment (Proceedings read at (3) above). Hence the Order :-

**GOVERNMENT ORDER NO. EN 189 NCE 2008 BANGALORE, DATED: 17th December 2008.**

Government accords approval for allotment of 3.00 MW capacity of Grid Connected Solar Photovoltaic Power Plant to Karnataka Power Corporation Limited, Bangalore at Yelahanka, Bangalore District subject to the following conditions :

1 (a) The allottee shall execute an agreement with Government within three months from the date of the capacity allotment order failing which the allotment order shall become automatically lapsed. There shall be no refund of the application fee of Rs. 5,000/- per M.W received by Karnataka Renewable Energy Development Limited, Bangalore.

(b) Such an agreement on Rs. 400.00 Stamp Paper shall be routed through the Managing Director, Karnataka Renewable Energy Development Limited, Bangalore who shall certify as to its correctness after due scrutiny.

(c) Before executing the agreement the project developer shall deposit in advance with Karnataka Renewable Energy Development Limited, Bangalore the detailed project report (DPR) processing fee at the rate of Rs. 25,000/- per M.W.

2(a) The project Developer shall obtain all statutory clearance from the respective authorities such as Karnataka Power Transmission Corporation Limited, Karnataka State Pollution Control Board, Forest, Ecology & Environment Department etc. Thereafter, he shall prepare and submit 3 copies of Detailed Project Report to the Managing Director, Karnataka Renewable Energy Development Limited, Bangalore to enable date to issue technical clearance for the project.

(b) The Deposit amount payable by the project allottee to Karnataka Renewable Energy Development Limited, Bangalore shall be adjusted towards a Detailed Project Report processing fee.

3. The allottee shall achieve financial closure within six months from the date of technical clearance for the Detailed Project Report by Karnataka Renewable Energy Development Limited, Bangalore.

4. The allottee shall take action to complete the project implementation within 12 months from the date of achieving financial closure.

5. Failure to reach any of the project milestones specified in Sl. No. 2,3, & 4 in the same order would constitute sufficient grounds to result in automatic cancellation of allotment. No notice on this account will be given to the allottee.

6. The project Developer shall enter into a Wheeling and Banking Agreement with Karnataka Power Transmission Corporation Limited (KPTCL) IN CASE OF SELLING POWER TO the third party and Power Purchase Agreement in case of KPTCL.

7. The allottee Company may seek full co-operation from the concerned Officers of the Government at the District and State level to ensure speedy completion of the project.

8. In the allotted site if any of the Government Project comes up, the Government Projects will have priority and the developer should not claim any compensation.

9. The Developer is wholly responsible for the objections raised by local people if any.

P.R. 18

By order and in the name of Governor of Karnataka,
**S.J. SAMPATH KUMAR**
Under Secretary to Government,
Energy Department

**ಇಂಧನ ಸಚಿವಾಲಯ**

**ವಿಷಯ:** ಮೆ:: ಬಿ.ಪಿ. ಎನರ್ಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್, ಮುಂಬೈ ಕಂಪನಿಗೆ 23.10 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಂಇ 243 ಎನ್‌ಸಿಇ 2002 ದಿನಾಂಕ: 5.3.2003.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಎನ್‌ಸಿಇ 2007 ದಿನಾಂಕ: 28.2.2007.

3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿಎಲ್/08/ಬಿಪಿ–ಇಐಪಿಎಲ್/2008/1911 ದಿನಾಂಕ: 13/14.11.2008.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಬಳ್ಳಾರಿ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಬಳ್ಳಾರಿ ಮತ್ತು ದಾವಣಗೆರೆ ಜಿಲ್ಲೆಗಳಲ್ಲಿ ಒಟ್ಟು 56.50 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಬಳ್ಳಾರಿ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ 56.50 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅಂಶಿಕ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 23.10 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಮೆ:: ಬಳ್ಳಾರಿ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಅನುಷ್ಠಾನ ಮಾಡಲು ಅನುಮತಿಸಲಾದ ಸಂಪೂರ್ಣ 23.10 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಬಿ.ಪಿ. ಎನರ್ಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್, ಮುಂಬೈ ಕಂಪನಿಗೆ ದಾವಣಗೆರೆ ಜಿಲ್ಲೆಯ ತೆಲಗಿ, ಅಲಗಿಲವಾಡ, ತುಗ್ಗಾವತಿ ಗ್ರಾಮಗಳಲ್ಲಿ ಅನುಷ್ಠಾನ ಮಾಡಲು ವರ್ಗಾವಣೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕುಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 380 ಎನ್‌ಸಿಇ 2008, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2008.**

ಮೆ:: ಬಳ್ಳಾರಿ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಅನುಷ್ಠಾನ ಮಾಡಲು ಅನುಮತಿಸಲಾದ 23.10 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಸಂಪೂರ್ಣವಾಗಿ ಮೆ:: ಬಿ.ಪಿ. ಎನರ್ಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್, ಮುಂಬೈ ಕಂಪನಿಗೆ ದಾವಣಗೆರೆ ಜಿಲ್ಲೆಯ ತೆಲಗಿ, ಅಲಗಿಲವಾಡ, ತುಗ್ಗಾವತಿ ಗ್ರಾಮಗಳಲ್ಲಿ ಅನುಷ್ಠಾನ ಮಾಡಲು ಕೆಳಗೆ ವಿವರಿಸಿದಂತೆ ವರ್ಗಾವಣೆ ಮಾಡಲಾಗಿದೆ :

| **Geographical area description of the project** |
| --- |
| North South oriented ridge with peaks 680 and 732 m elevations located West of Telagi village situated between :<br>**Latitude** : $14^0$38'N-$14^0$41'N<br>**Longitude** : $75^0$51'-$75^0$53'E |

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.17

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

**ವಿಷಯ:** ಮೆ:: ವರುಣೋದಯ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ **1.5** ಮೆಗಾ ವ್ಯಾಟ್ ಸಾಮರ್ಥ್ಯದ ಕಳಸ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ–ಆದೇಶ.

**ಓದಲಾಗಿದೆ:**

1 ಪತ್ರ ಸಂಖ್ಯೆ: ಕೆಆರ್‌ಇಡಿ/06/ಕಳಸ/2006/2337 ದಿನಾಂಕ: 8/15.11.2006.

2 ದಿನಾಂಕ: 29.12.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

3 ಸರ್ಕಾರಿ ಪತ್ರ ಸಂಖ್ಯೆ: ಇಎನ್ 441 ಎನ್‌ಸಿಇ 2006 ದಿನಾಂಕ: 11.5.2007.

4 ಪತ್ರ ಸಂಖ್ಯೆ: ಕೆಆರ್‌ಇಡಿ/06/ಕಳಸ/2007/1185 ದಿನಾಂಕ: 21/23.5.2007.

5 ಸರ್ಕಾರಿ ಪತ್ರ ಸಂಖ್ಯೆ : ಇಎನ್ 441 ಎನ್‌ಸಿಇ 2006 ದಿನಾಂಕ: 26.03.2008.

6 ಪತ್ರ ಸಂಖ್ಯೆ : ಕೆಆರ್‌ಇಡಿ/06/ಎನ್‌ರ್ಜಿ/2007/552 ದಿನಾಂಕ: 1/3.4.2008.

7 ದಿನಾಂಕ: 25.10.2008 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಿರ್ಣಯ.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ವರುಣೋದಯ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಂಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಕಳಸ ಗ್ರಾಮದ ಬಳಿ ಕರಲೆ ಹೊಳೆಗೆ ಅಡ್ಡಲಾಗಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಳಸ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದರು.

ಮೇಲೆ ಕ್ರಮಾಂಕ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 29.12.2006 ರಂದು ನಡೆದ ಕಿರು ಜಲ/ಪವನ ವಿದ್ಯುತ್/ಜೈವಿಕ ಆಧಾರಿತ ಸಹ ವಿದ್ಯುತ್ ಯೋಜನೆಗಳ ಹಂಚಿಕೆ ಸಮಿತಿ ಸಭೆಯ ನಡವಳಿಯಲ್ಲಿ ಕಿರು ಜಲ ವಿದ್ಯುತ್ ಯೋಜನೆ ಪಟ್ಟಿಯ ಕ್ರಮ ಸಂಖ್ಯೆ: 9 ರಲ್ಲಿ ಹಂಚಿಕೆ ಸಮಿತಿಯು ಸದರಿ ಯೋಜನೆಯನ್ನು ಹಂಚಿಕೆ ಮಾಡಲು ಶಿಫಾರಸ್ಸು ಮಾಡಿದೆ.

ಮೇಲೆ ಕ್ರಮಾಂಕ (3) ರಲ್ಲಿ ಓದಲಾದ ದಿನಾಂಕ: 11.5.2007 ಸರ್ಕಾರಿ ಪತ್ರದಲ್ಲಿ ಸದರಿ ಅಭಿವೃದ್ಧಿದಾರದ ಮೆ:: ವರುಣೋದಯ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಇದುವರೆಗೆ ಎಷ್ಟು ಯೋಜನೆಗಳು ಹಂಚಿಕೆಯಾಗಿವೆ? ಮತ್ತು ಹಂಚಿಕೆಯಾದ ಯೋಜನೆಗಳಲ್ಲಿ ಯಾವುದಾದರೂ ಯೋಜನೆ ಪ್ರಾರಂಭಿಸಿರುತ್ತಾರೆಯೇ? ಹಾಗೂ ಇವರ ಸಾಮರ್ಥ್ಯದ ಬಗ್ಗೆ ಮಾಹಿತಿಯನ್ನು ನೀಡಬೇಕೆಂದು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರನ್ನು ಕೋರಲಾಗಿತ್ತು.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಮೇಲೆ ಕ್ರಮಾಂಕ (4) ರಲ್ಲಿ ಓದಲಾದ ಪತ್ರದಲ್ಲಿ, ಮೆ:: ವರುಣೋದಯ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ದಿನಾಂಕ: 4.8.2006 ರಂದು ಚಿಕ್ಕಮಂಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಕಳಸ ಗ್ರಾಮದ ಬಳಿ ಕರಲೆ ಹೊಳೆಗೆ ಅಡ್ಡಲಾಗಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯ ಹಂಚಿಕೆಗಾಗಿ ಅರ್ಜಿಸಲ್ಲಿಸಿದ್ದಾರೆ. ಇದು ಇವರ ಪ್ರಥಮ ಅರ್ಜಿಯಾಗಿದ್ದು ಇದುವರೆಗೂ ಇವರಿಗೆ ಯಾವುದೇ ಕಿರುಜಲ ವಿದ್ಯುತ್ ಯೋಜನೆಯು ಹಂಚಿಕೆಯಾಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆ.

ಮೇಲೆ ಕ್ರಮಾಂಕ (5) ರಲ್ಲಿ ಓದಲಾದ ಸರ್ಕಾರಿ ಪತ್ರದಲ್ಲಿ ಸದರಿ ಪ್ರಕರಣದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅಭಿವೃದ್ಧಿದಾರರು ಅದೇ ಸ್ಥಳದಲ್ಲಿ ಯೋಜನೆಯನ್ನು ಅನಷ್ಠಾನಗೊಳಿಸಲು ಕೋರಿಕೆ ಸಲ್ಲಿಸಿರುತ್ತಾರೆಯೇ ? ಹಾಗೂ ಸದರಿ ಸ್ಥಳದಲ್ಲಿ ಯಾರಾದರು ಬೇರೆ ಅಭಿವೃದ್ಧಿದಾರರು ಈಗಾಗಲೇ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಮಂಜೂರಾತಿ ಆದೇಶ ಸರ್ಕಾರದಿಂದ ಪಡೆದಿದ್ದು,ಅದನ್ನು ಇನ್ನು ಅನುಷ್ಠಾನಗೊಳಿಸದೆ ಇರುತ್ತಾರೆಯೇ. ಹಾಗಿದ್ದಲ್ಲಿ ಕಾರಣಗಳೊಂದಿಗೆ ವಿವರಗಳನ್ನು ಒದಗಿಸುವಂತೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರನ್ನು ಕೋರಲಾಗಿತ್ತು.

ಮೇಲೆ ಕ್ರಮಾಂಕ (6) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತರವರು ಸದರಿ ಅರ್ಜಿದಾರರಲ್ಲದೆ, ಬೇರೆ ಯಾರಾದರೂ ಅಭಿವೃದ್ಧಿದಾರರು ಅದೇ ಸ್ಥಳದಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸಲು ಕೋರಿಕೆ ಸಲ್ಲಿಸಿರುವುದಿಲ್ಲ ಮತ್ತು ಸದರಿ ಸ್ಥಳದಲ್ಲಿ ಬೇರೆ ಯಾವ ಕಿರು ಜಲ ವಿದ್ಯುತ್ ಯೋಜನೆಯೂ ಮಂಜೂರಾಗಿಲ್ಲವೆಂದು ವರಿದಿ ನೀಡಿರುತ್ತಾರೆ.

ಮೇಲೆ ಕ್ರಮಾಂಕ (7) ರಲ್ಲಿ ಓದಲಾದ ದಿನಾಂಕ: 25.10.2008 ರಂದು ಜರುಗಿದ ಕಿರು ಜಲ/ಪವನ ವಿದ್ಯುತ್ /ಜೈವಿಕ ಆಧಾರಿತ ಸಹ ವಿದ್ಯುತ್ ಯೋಜನೆಗಳ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ದಿನಾಂಕ: 29.12.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯಲ್ಲಿ ಮೆ:: ವರುಣೋದಯ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಂಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಕಳಸ ಗ್ರಾಮದ ಬಳಿ ಕರಲೆ ಹೊಳೆಗೆ ಅಡ್ಡಲಾಗಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಳಸ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಸಮಿತಿಯು ಶಿಫಾರಸ್ಸು ಮಾಡಿದ್ದರೂ ಕೆಲವೊಂದು ಸ್ಪಷ್ಟೀಕರಣಗಳ ಅಗತ್ಯತೆಯ ಹಿನ್ನಲೆಯಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸಲು

ಇನ್ನು ಹಂಚಿಕೆ ಆದೇಶ ಹೊರಡಿಸಿರುವುದಿಲ್ಲವೆಂಬ ಅಂಶವನ್ನು ಸಮಿತಿಯ ಗಮನಕ್ಕೆ ತರಲಾಯಿತು. ಇದೊಂದು ಹಳೆಯ ಪ್ರಕರಣವಾಗಿರುವುದರಿಂದ ಹಂಚಿಕೆ ಆದೇಶ ಹೊರಡಿಸಲು ಯಾವುದೇ ಅಭ್ಯಂತರವಿರುವುದಿಲ್ಲವೆಂದು ಸಮಿತಿಯ ಸದಸ್ಯರು ಅಭಿಪ್ರಾಯ ವ್ಯಕ್ತಪಡಿಸಿದರು.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಲಾಗಿದೆ:

**ಸರ್ಕಾರದ ಆದೇಶ ಸಂಖ್ಯೆ: ಇಎನ್ 441 ಎನ್‌ಸಿಇ 2006, ಬೆಂಗಳೂರು, ದಿನಾಂಕ: 10ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸಂದರ್ಭದಲ್ಲಿ ಮೆ:: ವರುಣೋದಯ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಕಳಸ ಗ್ರಾಮದ ಬಳಿ ಕರಲೆ ಹೋಳೆಗೆ ಅಡ್ಡಲಾಗಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಳಸ ಕಿರು ಜಲ ವಿದ್ಯುತ್ ಯೋಜನೆಯನ್ನು ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗದಂತೆ ಅನುಷ್ಠಾನಗೊಳಿಸಲು ಈ ಕೆಳಗಿನ ಷರತ್ತಿಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1 (ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಒಡಂಬಡಿಕೆಯನ್ನು ರೂ.400.00 ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾ ವಾಟ್ ಒಂದಕ್ಕೆ ರೂ. 25,000.00 ದಂತೆ ರೂ. 1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2 (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ/ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ/ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಕರ್ನಾಟಕ ನವೀರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4 ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5 ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6 ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7 ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8 ಈ ಯೋಜನೆಗೆ ಸರ್ಕಾರದ ಯೋಜನೆಗಳಿಂದ, ಉದ್ದೇಶಿತ ಯೋಜನೆಗಳಿಂದ, ನೀರಾವರಿ ಯೋಜನೆಗಳಿಂದ ಮತ್ತು ಕುಡಿಯುವ ನೀರಿನ ಯೋಜನೆಗಳಿಂದ ತೊಂದರೆಯಾದಲ್ಲಿ ಅಭಿವೃದ್ಧಿದಾರರು ಯಾವುದೇ ಪರಿಹಾರವನ್ನು ಕೋರುವಂತಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1682

**ಎಸ್.ಜಿ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## ENERGY SECRETARIAT

**Sub:** Re-structured Accelerated Power Development and Reforms Programme (APDRP) during XI Plan-Constitution of a State Level Distribution Reform`s Committee - reg.

**Read:** Order No. 14/04/2008/APDRP dated: 19.9.2008. received from the Ministry of power, Government of India New Delhi

**PREAMBLE :**

In the Government of India order read at above, Sanction was accorded for implementation of re-structured Accelerated power Development and Reforms Programme (APDRP) during the X1th five year plan as a Central Sector scheme with revised terms and conditions.

In Para 11 of the Government of India order, it has been ordered that Distribution Reforms Committee (DRC) at the state level under the Chairmanship of the Chief Secretary / Principal Secretary / Secretary, Power / Energy Constituted by the state will continued to monitor the scheme at the State level.

Accordingly, Government have decided to constitute State level DRC. Hence the following order.

**GOVERNMENT ORDER NO. EN 79 PTC 2008 BANGALORE DTAED 18th November 2008.**

In the circumstances explained in the preamble, Government are pleased to constitute a State Level Distribution Reforms Committee (DRC) consisting of the following members to monitor the Accelerated Power Development and Reforms Programme (APDRP) scheme at the State level with immediate effect and until further orders:-

| | | |
|---|---|---|
| 01 | The Chief Secretary to Government of Karnataka | Chairman |
| 02 | Principal Secretary to Government Energy Department | Member |
| 03 | Principal Secretary to Government Finance Department | Member |
| 04 | Managing Director, KPCLtd., | Member |
| 05 | Managing Director, KPTCL | Member |
| 06 | Managing Director, PCKL | Member |
| 07 | Managing Director, BESCOM | Member |
| 08 | Managing Director, GESCOM | Member |

| | | |
|---|---|---|
| 09 | Managing Director, MESCOM | Member |
| 10 | Managing Director, HESCOM | Member |
| 11 | Managing Director, CESC | Member |
| 12 | Managing Director, Hukkeri Rural Electric Co-op Society, Hukkeri | Member |
| 13 | Deputy Secretary to Government Energy Department | Convener |

The said committee shall:

a) Recommend the project proposals of the distribution companies to the Ministry of Power after ensuring that all the required formalities have been complied with,

b) Monitor the compliance to conditionalities,

c) Monitor the achievement of milestones and targets under the Scheme.

By order and in the Name of the Governor Karnataka,

P.R.1630

**S.J. SAMPATH KUMAR**

Under Secretary to Government ,

Energy Department.

**ಇಂಧನ ಸಚಿವಾಲಯ**

**ವಿಷಯ:** ಮೆ:: ಮೈಸೂರ್ ಮರ್ಕಂಟೈಲ್ ಕಂಪನಿ ಲಿಮಿಟೆಡ್‌ನವರಿಗೆ ಹಂಚಿಕೆಯಾಗಿರುವ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪನಸಗೊಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಆಲ್ಫಾ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿ ಹೆಸರಿನಲ್ಲಿ ಅನುಷ್ಠಾನ ಮಾಡುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 159 ಎನ್‌ಸಿಇ 2006 ದಿನಾಂಕ: 16.10.2006.
2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಪನಸಗೊಳಿ/2008/1686 ದಿನಾಂಕ: 3/13.10.2008.
3) ಅಸಿಸ್ಟಂಟ್ ರಿಜಿಸ್ಟ್ರಾರ್ ಆಫ್ ಕಂಪನೀಸ್, ಕರ್ನಾಟಕ ಇವರು ನೀಡಿರುವ ಪ್ರಮಾಣ ಪತ್ರ ದಿನಾಂಕ: 19.11.2007.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ:: ಮೈಸೂರ್ ಮರ್ಕಂಟೈಲ್ ಕಂಪನಿ ಲಿಮಿಟೆಡ್‌ಗೆ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನ ಪನಸಗೊಳಿ ಗ್ರಾಮದ ಬಳಿ ಗಂಗವಳ್ಳಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪನಸಗೊಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಸದರಿ ಹಂಚಿಕೆಯಾಗಿರುವ ಯೋಜನಾ ಸ್ಥಳದಲ್ಲಿ ಸ್ಥಳೀಯರಿಂದ ವಿರೋಧವಿದ್ದು ಅದನ್ನು ಬಗೆಹರಿಸುವ ನಿಟ್ಟಿನಲ್ಲಿ ಸ್ಥಳೀಯರನ್ನು ಕಂಪನಿಯಲ್ಲಿ ಸೇರಿಸಿ ಹೊಸ ಕಂಪನಿಯಾದ ಮೆ:: ಆಲ್ಫಾ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿ ಹೆಸರಿನಲ್ಲಿ ಯೋಜನೆಯನ್ನು ಅನುಷ್ಠಾನ ಮಾಡಲು ಮೆ:: ಮೈಸೂರ್ ಮರ್ಕಂಟೈಲ್ ಕಂಪನಿ ಲಿಮಿಟೆಡ್ ಕಂಪನಿಯವರು ತೀರ್ಮಾನಿಸಿರುತ್ತಾರೆ.

ಅದರಂತೆ, ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಮೈಸೂರ್ ಮರ್ಕಂಟೈಲ್ ಕಂಪನಿ ಲಿಮಿಟೆಡ್‌ನ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪನಸಗೊಳಿ ಕಿರು ಜಲ ವಿದ್ಯುತ್ ಯೋಜನೆಯನ್ನು Subsidiary ಕಂಪನಿಯಾಗಿರುವ ಮೆ:: ಆಲ್ಫಾ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿ ಹೆಸರಿನಲ್ಲಿ ಅನುಷ್ಠಾನ ಮಾಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ಅಸಿಸ್ಟೆಂಟ್ ರಿಜಿಸ್ಟ್ರಾರ್ ಆಫ್ ಕಂಪನೀಸ್, ಕರ್ನಾಟಕ ಇವರು ಮೆ:: ಆಲ್ಫಾ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿ ಹೆಸರಿನಲ್ಲಿ ಪ್ರಮಾಣ ಪತ್ರವನ್ನು ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 300 ಎನ್‌ಸಿಇ 2008 (1), ಬೆಂಗಳೂರು, ದಿನಾಂಕ: 11ನೇ ಡಿಸೆಂಬರ್ 2008.**

ಮೆ:: ಮೈಸೂರ್ ಮರ್ಕಂಟೈಲ್ ಕಂಪನಿ ಲಿಮಿಟೆಡ್‌ಗೆ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನ ಪನಸಗೊಳಿ ಗ್ರಾಮದ ಬಳಿ ಗಂಗವಳ್ಳಿ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪನಸಗೊಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಆಲ್ಫಾ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿ ಎಂಬ ಹೆಸರಿನಲ್ಲಿ ಅನುಷ್ಠಾನ ಮಾಡಲು ಅನುಮತಿ ನೀಡಿದೆ.

ಸರ್ಕಾರಿ ಆದೇಶ ಸಂಖ್ಯೆ: ಇಎನ್ 159 ಎನ್‌ಸಿಇ 2006 ದಿನಾಂಕ: 16.10.2006 ರ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1685

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಿಷಯ:** ಮೆ:: ಮೈಸೂರ್ ಮರ್ಕಂಟೈಲ್ ಕಂಪನಿ ಲಿಮಿಟೆಡ್‌ನವರಿಗೆ ಹಂಚಿಕೆಯಾಗಿರುವ 5.00 ಮೆಗಾ ವ್ಯಾಟ್ ಸಾಮರ್ಥ್ಯದ ದುಗ್ಗನಬೈಲು ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ದುಗ್ಗನಬೈಲು ಮಿನಿ ಹೈಡ್ರೊ ಪ್ರೈವೇಟ್ ಲಿಮಿಟೆಡ್ ಕಂಪನಿ ಹೆಸರಿನಲ್ಲಿ ಅನುಷ್ಠಾನ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 158 ಎನ್‌ಸಿಇ 2006 ದಿನಾಂಕ: 16.10.2006.
2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ದುಗ್ಗನಬೈಲು/2008/1730 ದಿನಾಂಕ: 14/17.10.2008.
3) ರಿಜಿಸ್ಟ್ರಾರ್ ಆಫ್ ಕಂಪನೀಸ್, ಕರ್ನಾಟಕ ಇವರು ನೀಡಿರುವ ಪ್ರಮಾಣ ಪತ್ರ ದಿನಾಂಕ: 25.7.2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ:: ಮೈಸೂರ್ ಮರ್ಕಂಟೈಲ್ ಕಂಪನಿ ಲಿಮಿಟೆಡ್‌ಗೆ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನ ದುಗ್ಗನಬೈಲು ಗ್ರಾಮದ ಬಳಿ ಗಂಗವಳ್ಳಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ದುಗ್ಗನಬೈಲು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಸದರಿ ಹಂಚಿಕೆಯಾಗಿರುವ ಯೋಜನಾ ಸ್ಥಳದಲ್ಲಿ ಸ್ಥಳೀಯರಿಂದ ವಿರೋಧವಿದ್ದು ಅದನ್ನು ಬಗೆಹರಿಸುವ ನಿಟ್ಟಿನಲ್ಲಿ ಸ್ಥಳೀಯರನ್ನು ಕಂಪನಿಯಲ್ಲಿ ಸೇರಿಸಿ ಹೊಸ ಕಂಪನಿಯಾದ ಮೆ:: ದುಗ್ಗನಬೈಲು ಮಿನಿ ಹೈಡ್ರೊ ಪ್ರೈವೇಟ್ ಲಿಮಿಟೆಡ್ ಕಂಪನಿ ಹೆಸರಿನಲ್ಲಿ ಯೋಜನೆಯನ್ನು ಅನುಷ್ಠಾನ ಮಾಡಲು ಮೆ:: ಮೈಸೂರ್ ಮರ್ಕಂಟೈಲ್ ಕಂಪನಿ ಲಿಮಿಟೆಡ್ ಕಂಪನಿಯವರು ತೀರ್ಮಾನಿಸಿರುತ್ತಾರೆ.

ಅದರಂತೆ, ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಮೈಸೂರ್ ಮರ್ಕಂಟೈಲ್ ಕಂಪನಿ ಲಿಮಿಟೆಡ್‌ನ 5.00 ಮೆಗಾ ವ್ಯಾಟ್ ಸಾಮರ್ಥ್ಯದ ದುಗ್ಗನಬೈಲು ಕಿರು ಜಲ ವಿದ್ಯುತ್ ಯೋಜನೆಯನ್ನು Subsidiary ಕಂಪನಿಯಾಗಿರುವ ಮೆ:: ದುಗ್ಗನಬೈಲು ಮಿನಿ ಹೈಡ್ರೊ ಪ್ರೈವೇಟ್ ಲಿಮಿಟೆಡ್ ಕಂಪನಿ ಹೆಸರಿನಲ್ಲಿ ಅನುಷ್ಠಾನ ಮಾಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ರಿಜಿಸ್ಟ್ರಾರ್ ಆಫ್ ಕಂಪನೀಸ್, ಕರ್ನಾಟಕ ಇವರು ಮೆ:: ದುಗ್ಗನಬೈಲು ಮಿನಿ ಹೈಡ್ರೊ ಪ್ರೈವೇಟ್ ಲಿಮಿಟೆಡ್ ಕಂಪನಿ ಹೆಸರಿನಲ್ಲಿ ಪ್ರಮಾಣ ಪತ್ರವನ್ನು ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 300 ಎನ್‌ಸಿಇ 2008 (2), ಬೆಂಗಳೂರು, ದಿನಾಂಕ: 11ನೇ ಡಿಸೆಂಬರ್ 2008.**

ಮೆ:: ಮೈಸೂರ್ ಮರ್ಕಂಟೈಲ್ ಕಂಪನಿ ಲಿಮಿಟೆಡ್‌ಗೆ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನ ದುಗ್ಗನಬೈಲು ಗ್ರಾಮದ ಬಳಿ ಗಂಗವಳ್ಳಿ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 5.00 ಮೆಗಾ ವ್ಯಾಟ್ ಸಾಮರ್ಥ್ಯದ ದುಗ್ಗನಬೈಲು ಕಿರು ಜಲ

ವಿದ್ಯುತ್ ಯೋಜನೆಯನ್ನು ಮೆ:: ದುಗ್ಗನಬೈಲು ಮಿನಿ ಹೈಡ್ರೊ ಪ್ರೈವೇಟ್ ಲಿಮಿಟೆಡ್ ಕಂಪನಿ ಎಂಬ ಹೆಸರಿನಲ್ಲಿ ಅನುಷ್ಠಾನ ಮಾಡಲು ಅನುಮತಿ ನೀಡಿದೆ.

ಸರ್ಕಾರಿ ಆದೇಶ ಸಂಖ್ಯೆ: ಇಎನ್ 158 ಎನ್‌ಸಿಇ 2006 ದಿನಾಂಕ: 16.10.2006 ರ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1686

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

**ವಿಷಯ:** ಮೆ:: ಮೈಸೂರ್ ಮರ್ಕಂಟೈಲ್ ಕಂಪನಿ ಲಿಮಿಟೆಡ್‌ನವರಿಗೆ ಹಂಚಿಕೆಯಾಗಿರುವ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಬೈರೆಕೊಪ್ಪ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಬೈರೆಕೊಪ್ಪ ಮಿನಿ ಹೈಡ್ರೊ ಪ್ರೈವೇಟ್ ಲಿಮಿಟೆಡ್ ಕಂಪನಿ ಹೆಸರಿನಲ್ಲಿ ಅನುಷ್ಠಾನ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 160 ಎನ್‌ಸಿಇ 2006 ದಿನಾಂಕ: 16.10.2006.
2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಬೈರೆಕೊಪ್ಪ /2008/1919 ದಿನಾಂಕ: 14.11.2008.
3) ರಿಜಿಸ್ಟ್ರಾರ್ ಆಫ್ ಕಂಪನೀಸ್, ಕರ್ನಾಟಕ ಇವರು ನೀಡಿರುವ ಪ್ರಮಾಣ ಪತ್ರ ದಿನಾಂಕ: 25.7.2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ:: ಮೈಸೂರ್ ಮರ್ಕಂಟೈಲ್ ಕಂಪನಿ ಲಿಮಿಟೆಡ್‌ಗೆ ಉತ್ತರ ಕನ್ನಡ ಜಿಲ್ಲೆಯ ಅಂಕೋಲ ತಾಲ್ಲೂಕಿನ ಬೈರೆಕೊಪ್ಪ ಗ್ರಾಮದ ಬಳಿ ಗಂಗವಳ್ಳಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಬೈರೆಕೊಪ್ಪ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಸದರಿ ಹಂಚಿಕೆಯಾಗಿರುವ ಯೋಜನಾ ಸ್ಥಳದಲ್ಲಿ ಸ್ಥಳೀಯರಿಂದ ವಿರೋಧವಿದ್ದು ಅದನ್ನು ಬಗೆಹರಿಸುವ ನಿಟ್ಟಿನಲ್ಲಿ ಸ್ಥಳೀಯರನ್ನು ಕಂಪನಿಯಲ್ಲಿ ಸೇರಿಸಿ ಹೊಸ ಕಂಪನಿಯಾದ ಮೆ:: ಬೈರೆಕೊಪ್ಪ ಮಿನಿ ಹೈಡ್ರೊ ಪ್ರೈವೇಟ್ ಲಿಮಿಟೆಡ್ ಕಂಪನಿ ಹೆಸರಿನಲ್ಲಿ ಯೋಜನೆಯನ್ನು ಅನುಷ್ಠಾನ ಮಾಡಲು ಮೆ:: ಮೈಸೂರ್ ಮರ್ಕಂಟೈಲ್ ಕಂಪನಿ ಲಿಮಿಟೆಡ್ ಕಂಪನಿಯವರು ತೀರ್ಮಾನಿಸಿರುತ್ತಾರೆ.

ಅದರಂತೆ, ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಮೈಸೂರ್ ಮರ್ಕಂಟೈಲ್ ಕಂಪನಿ ಲಿಮಿಟೆಡ್‌ನ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಬೈರೆಕೊಪ್ಪ ಕಿರು ಜಲ ವಿದ್ಯುತ್ ಯೋಜನೆಯನ್ನು Subsidiary ಕಂಪನಿಯಾಗಿರುವ ಮೆ:: ಬೈರೆಕೊಪ್ಪ ಮಿನಿ ಹೈಡ್ರೊ ಪ್ರೈವೇಟ್ ಲಿಮಿಟೆಡ್ ಕಂಪನಿ ಹೆಸರಿನಲ್ಲಿ ಅನುಷ್ಠಾನ ಮಾಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ರಿಜಿಸ್ಟ್ರಾರ್ ಆಫ್ ಕಂಪನೀಸ್, ಕರ್ನಾಟಕ ಇವರು ಮೆ:: ಬೈರೆಕೊಪ್ಪ ಮಿನಿ ಹೈಡ್ರೊ ಪ್ರೈವೇಟ್ ಲಿಮಿಟೆಡ್ ಕಂಪನಿ ಹೆಸರಿನಲ್ಲಿ ಪ್ರಮಾಣ ಪತ್ರವನ್ನು ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 300 ಎನ್‌ಸಿಇ 2008 (3), ಬೆಂಗಳೂರು, ದಿನಾಂಕ: 11ನೇ ಡಿಸೆಂಬರ್ 2008.**

ಮೆ:: ಮೈಸೂರ್ ಮರ್ಕಂಟೈಲ್ ಕಂಪನಿ ಲಿಮಿಟೆಡ್‌ಗೆ ಉತ್ತರ ಕನ್ನಡ ಜಿಲ್ಲೆಯ ಅಂಕೋಲ ತಾಲ್ಲೂಕಿನ ಬೈರೆಕೊಪ್ಪ ಗ್ರಾಮದ ಬಳಿ ಗಂಗವಳ್ಳಿ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಬೈರೆಕೊಪ್ಪ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಬೈರೆಕೊಪ್ಪ ಮಿನಿ ಹೈಡ್ರೊ ಪ್ರೈವೇಟ್ ಲಿಮಿಟೆಡ್ ಕಂಪನಿ ಎಂಬ ಹೆಸರಿನಲ್ಲಿ ಅನುಷ್ಠಾನ ಮಾಡಲು ಅನುಮತಿ ನೀಡಿದೆ.

ಸರ್ಕಾರಿ ಆದೇಶ ಸಂಖ್ಯೆ: ಇಎನ್ 160 ಎನ್‌ಸಿಇ 2006 ದಿನಾಂಕ: 16.10.2006 ರ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1684

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಿಷಯ:** ಮೆ:: ಮೈಸೂರ್ ಮರ್ಕಂಟೈಲ್ ಕಂಪನಿ ಲಿಮಿಟೆಡ್‌ನವರಿಗೆ ಹಂಚಿಕೆಯಾಗಿರುವ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಹೊಸಕಂಬಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಹೊಸಕಂಬಿ ಮಿನಿ ಹೈಡ್ರೊ ಪ್ರೈವೇಟ್ ಲಿಮಿಟೆಡ್ ಕಂಪನಿ ಹೆಸರಿನಲ್ಲಿ ಅನುಷ್ಠಾನ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 175 ಎನ್‌ಸಿಇ 2006 ದಿನಾಂಕ: 16.10.2006.
2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಹೊಸಕಂಬಿ/2008/1918 ದಿನಾಂಕ: 14.11.2008.
3) ರಿಜಿಸ್ಟ್ರಾರ್ ಆಫ್ ಕಂಪನೀಸ್, ಕರ್ನಾಟಕ ಇವರು ನೀಡಿರುವ ಪ್ರಮಾಣ ಪತ್ರ ದಿನಾಂಕ: 25.7.2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ:: ಮೈಸೂರ್ ಮರ್ಕಂಟೈಲ್ ಕಂಪನಿ ಲಿಮಿಟೆಡ್‌ಗೆ ಉತ್ತರ ಕನ್ನಡ ಜಿಲ್ಲೆಯ ಅಂಕೋಲ ತಾಲ್ಲೂಕಿನ ಹೊಸಕಂಬಿ ಗ್ರಾಮದ ಬಳಿ ಗಂಗವಳ್ಳಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಹೊಸಕಂಬಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಸದರಿ ಹಂಚಿಕೆಯಾಗಿರುವ ಯೋಜನಾ ಸ್ಥಳದಲ್ಲಿ ಸ್ಥಳೀಯರಿಂದ ವಿರೋಧವಿದ್ದು ಅದನ್ನು ಬಗೆಹರಿಸುವ ನಿಟ್ಟಿನಲ್ಲಿ ಸ್ಥಳೀಯರನ್ನು ಕಂಪನಿಯಲ್ಲಿ ಸೇರಿಸಿ ಹೊಸ ಕಂಪನಿಯಾದ ಮೆ:: ಹೊಸಕಂಬಿ ಮಿನಿ ಹೈಡ್ರೊ ಪ್ರೈವೇಟ್ ಲಿಮಿಟೆಡ್ ಕಂಪನಿ ಹೆಸರಿನಲ್ಲಿ ಯೋಜನೆಯನ್ನು ಅನುಷ್ಠಾನ ಮಾಡಲು ಮೆ:: ಮೈಸೂರ್ ಮರ್ಕಂಟೈಲ್ ಕಂಪನಿ ಲಿಮಿಟೆಡ್ ಕಂಪನಿಯವರು ತೀರ್ಮಾನಿಸಿರುತ್ತಾರೆ.

ಅದರಂತೆ, ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಮೈಸೂರ್ ಮರ್ಕಂಟೈಲ್ ಕಂಪನಿ ಲಿಮಿಟೆಡ್‌ನ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಹೊಸಕಂಬಿ ಕಿರು ಜಲ ವಿದ್ಯುತ್ ಯೋಜನೆಯನ್ನು Subsidiary ಕಂಪನಿಯಾಗಿರುವ ಮೆ:: ಹೊಸಕಂಬಿ ಮಿನಿ ಹೈಡ್ರೊ ಪ್ರೈವೇಟ್ ಲಿಮಿಟೆಡ್ ಕಂಪನಿ ಹೆಸರಿನಲ್ಲಿ ಅನುಷ್ಠಾನ ಮಾಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ರಿಜಿಸ್ಟ್ರಾರ್ ಆಫ್ ಕಂಪನೀಸ್, ಕರ್ನಾಟಕ ಇವರು ಮೆ:: ಹೊಸಕಂಬಿ ಮಿನಿ ಹೈಡ್ರೊ ಪ್ರೈವೇಟ್ ಲಿಮಿಟೆಡ್ ಕಂಪನಿ ಹೆಸರಿನಲ್ಲಿ ಪ್ರಮಾಣ ಪತ್ರವನ್ನು ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 300 ಎನ್‌ಸಿಇ 2008 (4), ಬೆಂಗಳೂರು, ದಿನಾಂಕ: 11ನೇ ಡಿಸೆಂಬರ್ 2008.**

ಮೆ:: ಮೈಸೂರ್ ಮರ್ಕಂಟೈಲ್ ಕಂಪನಿ ಲಿಮಿಟೆಡ್‌ಗೆ ಉತ್ತರ ಕನ್ನಡ ಜಿಲ್ಲೆಯ ಅಂಕೋಲ ತಾಲ್ಲೂಕಿನ ಹೊಸಕಂಬಿ ಗ್ರಾಮದ ಬಳಿ ಗಂಗವಳ್ಳಿ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಹೊಸಕಂಬಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಹೊಸಕಂಬಿ ಮಿನಿ ಹೈಡ್ರೊ ಪ್ರೈವೇಟ್ ಲಿಮಿಟೆಡ್ ಕಂಪನಿ ಎಂಬ ಹೆಸರಿನಲ್ಲಿ ಅನುಷ್ಠಾನ ಮಾಡಲು ಅನುಮತಿ ನೀಡಿದೆ.

ಸರ್ಕಾರಿ ಆದೇಶ ಸಂಖ್ಯೆ: ಇಎನ್ 175 ಎನ್‌ಸಿಇ 2006 ದಿನಾಂಕ: 16.10.2006 ರ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1683

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಿಷಯ:** ಮೆ:: ಸಿಬ್ರೋಸ್ ಪವರ್ ಜನರೇಷನ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆ:: ಸಂಗಮೇಶ್ವರ ಎನರ್ಜಿ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಿ, ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 1.5 ಮೆಗಾ ವ್ಯಾಟ್‌ನಿಂದ 9.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ, ಕಾಲಾವಕಾಶವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 39 ಎನ್‌ಸಿಇ 2002 ದಿನಾಂಕ: 13.6.2002.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಇಟ್ಟಗಿ/08/1705 ದಿನಾಂಕ: 14/15.10.2008.

3) ರಿಜಿಸ್ಟ್ರಾರ್ ಆಫ್ ಕಂಪನೀಸ್, ತಮಿಳುನಾಡು, ಚೆನ್ನೈ ಇವರು ದಿನಾಂಕ: 19.7.2007 ರಂದು ನೀಡಿರುವ ಸರ್ಟಿಫಿಕೇಟ್.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1) ರ ಆದೇಶದಲ್ಲಿ ಮೆ:: ಸಿಬ್ರೋಸ್ ಪವರ್ ಜನರೇಷನ್ ಪ್ರೈವೇಟ್ ಲಿಮಿಟೆಡ್, ಚೆನ್ನೈ ಈ ಕಂಪನಿಗೆ ಬಳ್ಳಾರಿ ಜಿಲ್ಲೆಯ ಎಮ್ಮಿಗನೂರು ತಾಲೂಕಿನ ಇಟ್ಟಗಿ ಗ್ರಾಮದ ತುಂಗಾಭದ್ರಾ ನದಿಯಿಂದ 1 ಕಿ.ಮೀ. ಕೆಳತೊರೆಯಲ್ಲಿ 1.5 ಮೆ.ವ್ಯಾ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ. (by utilizing total water flowing in Thungabadra river with about 2 KM intake and 2 KM Tail Race canal and Longitude 76°40'28'' East & Latitude 15°28'27'' North).

ಮೇಲೆ ಓದಲಾದ ಕ್ರಮಾಂಕ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಕೆಳಕಂಡ ಮೂರು ಅಂಶಗಳಿಗೆ ಸರ್ಕಾರದ ಅನುಮೋದನೆಗಾಗಿ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ :

ಅ) ರಿಜಿಸ್ಟ್ರಾರ್ ಆಫ್ ಕಂಪನೀಸ್, ತಮಿಳುನಾಡು, ಚೆನ್ನೈ ಇವರು ದಿನಾಂಕ: 19.7.2007 ರಂದು ನೀಡಿರುವ ಸರ್ಟಿಫಿಕೇಟ್ ಆಧಾರದ ಮೇಲೆ ಮೆ:: ಸಿಬ್ರೋಸ್ ಪವರ್ ಜನರೇಷನ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆ:: ಸಂಗಮೇಶ್ವರ ಎನರ್ಜಿ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸುವುದು.

ಅ) ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 1.5 ಮೆಗಾ ವ್ಯಾಟ್‌ನಿಂದ 9.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವುದು.

ಆ) ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಮುಂದಿನ 2 ವರ್ಷಗಳಿಗೆ ವಿಸ್ತರಿಸುವುದು.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ರಿಜಿಸ್ಟ್ರಾರ್ ಆಫ್ ಕಂಪನೀಸ್, ತಮಿಳುನಾಡು, ಚೆನ್ನೈ ಇವರು ಮೆ:: ಸಿಬ್ರೋಸ್ ಪವರ್ ಜನರೇಷನ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆ:: ಸಂಗಮೇಶ್ವರ ಎನರ್ಜಿ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಿ ಸರ್ಟಿಫಿಕೇಟ್ ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 304 ಎನ್‌ಸಿಇ 2008, ಬೆಂಗಳೂರು, ದಿನಾಂಕ: 3ನೇ ಡಿಸೆಂಬರ್ 2008.**

ಮೆ:: ಸಿಬ್ರೋಸ್ ಪವರ್ ಜನರೇಷನ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆ:: ಸಂಗಮೇಶ್ವರ ಎನರ್ಜಿ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಲು ಅನುಮೋದನೆ ನೀಡಲಾಗಿದೆ.

ಸದರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಈ ಆದೇಶ ಹೊರಡಿಸಿದ ದಿನಾಂಕದಿಂದ ಕಾಲಾವಕಾಶವನ್ನು ಮುಂದಿನ 2 ವರ್ಷಗಳ ಅವಧಿಗೆ ವಿಸ್ತರಿಸಲಾಗಿದೆ.

ಸದರಿ ಕಂಪನಿಗೆ ಹಂಚಿಕೆಯಾಗಿರುವ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 1.5 ಮೆಗಾ ವ್ಯಾಟ್‌ನಿಂದ 9.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1687

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ತತ್ಕಾಲ್ ಪೋಡಿ ಪ್ರಕರಣಗಳಿಗೆ ಸಂಬಂಧಿಸಿದಂತೆ ಸಾರ್ವಜನಿಕರು ಶುಲ್ಕ ಪಾವತಿಸಿ ನಿಗಧಿತ ಅರ್ಜಿಯನ್ನು ಪಡೆದು ಭರ್ತಿ ಮಾಡಿ ಕಚೇರಿಗೆ ಸಲ್ಲಿಸುವ ಬಗ್ಗೆ.

**ಓದಲಾಗಿದೆ:**
1. ಸ.ಆ. ಸಂ. 142 ಭೂದಾಸ 2008, ದಿನಾಂಕ 12–8–2008 ಮತ್ತು ತಿದ್ದುಪಡಿ ಆದೇಶ ದಿನಾಂಕ 23–8–2009 ಮತ್ತು 26–11–2008.
2. ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರು ಏಕಕಡತ ಪದ್ಧತಿಯಲ್ಲಿ ಸಲ್ಲಿಸಲಾದ ಪ್ರಸ್ತಾವನೆ ಸಂಖ್ಯೆ: ಸಂ.ತಾಂ.ಪಭೂ.ಘಟಕ 61/08–09, ದಿನಾಂಕ: 7–11–2008.

**ಪ್ರಸ್ತಾವನೆ :**

ಸರ್ಕಾರದ ಆದೇಶ ಸಂಖ್ಯೆ: ಕಂ.ಇ. 142 ಭೂದಾಸ 2008, ದಿನಾಂಕ 12–8–2008 ಮತ್ತು 23–8–2008 ಮತ್ತು 26–11–2008 ರಂತೆ ತತ್ಕಾಲ್ ಪೋಡಿ ಯೋಜನೆಯನ್ನು ಜಾರಿಗೆ ತರಲಾಗಿದೆ. ಈ ತತ್ಕಾಲ್ ಪೋಡಿ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಆಯುಕ್ತರ ಕಚೇರಿಯಿಂದ ಅವಶ್ಯಕವಾದಂತಹ ಒಂದು ಸುತ್ತೋಲೆಯನ್ನು (ಸುತ್ತೋಲೆ ಸಂ. ತಾಂ.ಪ.ಭೂ.ಘಟಕ/52/2007–08, ದಿನಾಂಕ 4–10–2008 (ಹೊರಡಿಸಲಾಗಿದೆ. ತತ್ಕಾಲ್ ಪೋಡಿಗೆ ಅರ್ಜಿ ಸಲ್ಲಿಸುವವರು ನಿಗಧಿತ ಅರ್ಜಿಯನ್ನು ಸಲ್ಲಿಸಿ ಪೋಡಿ ಕೆಲಸವನ್ನು ಇಲಾಖೆಯಿಂದ ನಿರ್ವಹಿಸಿಕೊಳ್ಳಲು ಈ ಸುತ್ತೋಲೆಯಲ್ಲಿ ತಿಳಿಸಲಾಗಿದೆ. ಅರ್ಜಿಗಳನ್ನು ಇಲಾಖೆಯ ಕೇಂದ್ರ ಕಾರ್ಯಾಲಯದ ಮುದ್ರಣಾಲಯದಿಂದ ಮುದ್ರಿಸಿ ಎಲ್ಲಾ ತಾಲ್ಲೂಕು ಕಚೇರಿಗಳಿಗೆ ಸರಬರಾಜು ಮಾಡಲಾಗುತ್ತದೆ ಎಂದು, ಈ ಅರ್ಜಿಗಳಿಗೆ ರೂ. 10.00 ನ್ನು ನಿಗಧಿಪಡಿಸಬೇಕೆಂದು ಆಯುಕ್ತರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ತತ್ಕಾಲ್ ಪೋಡಿ ಅರ್ಜಿಗಳನ್ನು ನಿಗಧಿತ ನಮೂನೆಯಲ್ಲಿ ಮುದ್ರಿಸಿ ಮಾರಾಟ ಮಾಡುವ ಬಗ್ಗೆ ಆಯುಕ್ತರು ಈ ಕೆಳಕಂಡಂತೆ ಸಮರ್ಥನೆ ನೀಡಿರುತ್ತಾರೆ.

1. ಸಾರ್ವಜನಿಕರು ಅರ್ಜಿಗಳನ್ನು ಸಲ್ಲಿಸುವಲ್ಲಿ ಏಕರೂಪತೆ ಅವಶ್ಯಕತೆ ಇದ್ದು ಇದನ್ನು ಈಡೇರಿಸಿದಂತಾಗುತ್ತದೆ.
2. ತತ್ಕಾಲ್ ಪೋಡಿ ಅಳತೆಗೆ ಬೇಕಾಗುವ ಎಲ್ಲಾ ಅವಶ್ಯ ಮಾಹಿತಿಯನ್ನು ಪಡೆಯಲು ಸಾಧ್ಯವಾಗುತ್ತದೆ.
3. ಸಾರ್ವಜನಿಕರಿಗೆ ಖಾಸಗಿ ವ್ಯಕ್ತಿಗಳು (ಮುದ್ರಣಕಾರರು) ಅರ್ಜಿಗಳನ್ನು ಹೆಚ್ಚಿನ ಬೆಲೆಗೆ ಮಾರಾಟ ಮಾಡುವುದನ್ನು ತಪ್ಪಿಸಿದಂತಾಗುತ್ತದೆ.
4. ಸಾರ್ವಜನಿಕರು ನಿಗಧಿತ ಅರ್ಜಿಯನ್ನು ಬರ್ತಿ ಮಾಡಿ ಸಲ್ಲಿಸಬೇಕಾದಂತಹ ಸ್ಥಳದಲ್ಲಿಯೇ ಸುಲಭವಾಗಿ ದೊರಕಿಸಿಕೊಟ್ಟಂತಾಗುತ್ತದೆ.
5. ನಿಗಧಿತ ಅರ್ಜಿ ಸಂಖ್ಯೆ ನೀಡಿ ಮಾರಾಟ ಮಾಡುವುದರಿಂದ ಇವುಗಳ ದುರುಪಯೋಗವನ್ನು ತಡೆಗಟ್ಟಿದಂತಾಗುತ್ತದೆ.

6. ಅರ್ಜಿಗಳಿಗೆ ಕೇವಲ ರೂ. 10.00ನ್ನು ನಿಗಧಿಪಡಿಸಿರುವುದು ಸಾರ್ವಜನಿಕರಿಗೆ ಹೆಚ್ಚಿನ ಹೊರೆಯಾಗುವುದಿಲ್ಲ. ಯಾವುದೇ ಬೆಲೆಯನ್ನು ನಿಗಧಿಪಡಿಸದೇ ಅರ್ಜಿಗಳು ದೊರಕಿದ್ದಲ್ಲಿ ಸಾರ್ವಜನಿಕರು ಇವುಗಳನ್ನು ಅಪವ್ಯಯ ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಇದರಿಂದ ಸರ್ಕಾರದಿಂದ ಮುದ್ರಣಕ್ಕೆ ಮತ್ತು ಸಾಮಗ್ರಿಗೆ ವೆಚ್ಚ ಮಾಡಲಾಗಿರುವ ಹಣವು ಪೋಲಾಗುವುದನ್ನು ತಪ್ಪಿಸಿದಂತಾಗುತ್ತದೆ.
7. ಹಲವಾರು ಗ್ರಾಮಸ್ಥರು ಅನಕ್ಷರಸ್ಥರಾಗಿದ್ದು ಸರಿಯಾದಂತಹ ರೀತಿಯಲ್ಲಿ ಅರ್ಜಿಯನ್ನು ಬರೆಯಲು ಬಾರದೇ ಇರುವಂತಹ ಪ್ರಸಂಗದಲ್ಲಿ ನಿಗಧಿತ ನಮೂನೆ ಸಾರ್ವಜನಿಕರಿಗೆ ಹೆಚ್ಚಿನ ಪ್ರಯೋಜನಕಾರಿಯಾಗಿರುತ್ತದೆ.
8. ಪ್ರತಿಯೊಂದು ಅರ್ಜಿಗೂ ಸಂಖ್ಯೆಯನ್ನು ನೀಡಿ ಮಾರಾಟ ಮಾಡುವುದರಿಂದ ಮಾರಾಟವಾಗುವ ಸಂಖ್ಯೆಯ ಆಧಾರದ ಮೇಲೆ ತತ್ಕಾಲ್ ಪೋಡಿಗೆ ಸ್ವೀಕೃತವಾಗಬಹುದಾದಂತಹ ಅರ್ಜಿಗಳ ಅಂದಾಜು ಸಂಖ್ಯೆ ಲಭ್ಯವಾಗುತ್ತದೆ.

ಮೇಲ್ಕಂಡ ಎಲ್ಲಾ ಕಾರಣಗಳಿಂದ ತತ್ಕಾಲ್ ಪೋಡಿಗೆ ಸಂಬಂಧಿಸಿದಂತೆ ನಿಗಧಿತ ಅರ್ಜಿಗೆ ರೂ. 10/–ನ್ನು ನಿಗಧಿಪಡಿಸಬೇಕೆಂಬ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 264 ಭೂದಾಸ 2008, ದಿನಾಂಕ: 16ನೇ ಡಿಸೆಂಬರ್ 2008.**

ತತ್ಕಾಲ್ ಪೋಡಿ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರು ಪ್ರಸ್ತಾಪಿಸಿರುವ ನಿಗಧಿತ ಅರ್ಜಿಯನ್ನು ಸಾರ್ವಜನಿಕರು ರೂ.5/– (ರೂಪಾಯಿ ಐದು ಮಾತ್ರ) ಪಾವತಿಸಿ ಪಡೆಯಲು ಮತ್ತು ಈ ರೀತಿ ಸಂಗ್ರಹವಾದ ಹಣವನ್ನು ಸರ್ಕಾರದ ಲೆಕ್ಕಶೀರ್ಷಿಕೆ 0029–00–106–0–05 ಇತರೆ ವಸೂಲಿಗಳು ಎಂಬ ಲೆಕ್ಕಶೀರ್ಷಿಕೆಗೆ ಜಮಾ ಮಾಡಲು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.159

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಮಾಪನ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯಲ್ಲಿ ಉಪನ್ಯಾಸಕರಾಗಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇಲಾಖೆಯ ವಿಮಾ ವೈದ್ಯಾಧಿಕಾರಿಗಳಾದ ಡಾ: ಸಿ.ಎನ್. ಯೋಗೀಶ್ವರಪ್ಪ ಮತ್ತು ಡಾ: ವಿ.ಪಿ. ದಯಾನಂದ ಇವರ ಸೇವೆಯನ್ನು ಸ್ವಾಯತ್ತ ಸಂಸ್ಥೆಯಾದ ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯಲ್ಲಿ ಖಾಯಂ ಆಗಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 199 ಎಂಎಂಸಿ 2006, ದಿನಾಂಕ 13–11–2006.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 66 ಎಂಸಿಎಲ್ 2006, ದಿನಾಂಕ 1–3–2007.
3. ಸಂಖ್ಯೆ: ಎಸ್.ಆರ್.ಓ. (2)/61/2007–08, ದಿನಾಂಕ 23–6–2007.
4. ಅನಧಿಕೃತ ಟಿಪ್ಪಣಿ ಸಂಖ್ಯೆ: ಕಾಇ 320 ಎಲ್ಎಸ್ಐ 2007, ದಿನಾಂಕ 6–9–2008.
5. ಬೆಂವೈವಿ/ಸಿ(2)/34/2006–07, ದಿನಾಂಕ 3–10–2008.

**ಪ್ರಸ್ತಾವನೆ :**

ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇಲಾಖೆಯಲ್ಲಿ ವಿಮಾ ವೈದ್ಯಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಡಾ: ಸಿ.ಎನ್. ಯೋಗೀಶ್ವರಪ್ಪ ಮತ್ತು ಡಾ: ವಿ.ಪಿ. ದಯಾನಂದ ಇವರನ್ನು ಮೇಲೆ (1) ಮತ್ತು (2)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಬೆಂಗಳೂರು ವೈದ್ಯಕೀಯ ಕಾಲೇಜಿನಲ್ಲಿ ಕ್ರಮವಾಗಿ ಪ್ಲಾಸ್ಟಿಕ್ ಸರ್ಜರಿ ವಿಭಾಗ ಹಾಗೂ ಅರವಳಿಕೆ ಶಾಸ್ತ್ರ ವಿಭಾಗದಲ್ಲಿ ಖಾಲಿ ಇರುವ ಉಪನ್ಯಾಸಕರ ಹುದ್ದೆಗೆ 2 ವರ್ಷಗಳ ಅವಧಿಗೆ ಅವರ ಸ್ವಂತ ವೇತನ

ಮತ್ತು ಶ್ರೇಣಿಯ ಮೇಲೆ ನಿಯೋಜನೆ ಮೇಲೆ ನೇಮಿಸಲಾಗಿತ್ತು. ಪ್ರಕಾರ, ಇವರು ಕ್ರಮವಾಗಿ ದಿನಾಂಕ 18–11–2006 ಮತ್ತು ದಿನಾಂಕ 5–3–2007 ರಿಂದ ಕಾರ್ಯ ನಿರ್ವಹಿಸುತ್ತಿದ್ದಾರೆ.

ನಿರ್ದೇಶಕರು, ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ರವರು ಮೇಲೆ (3)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇಲಾಖೆಯಲ್ಲಿ ವಿಮಾ ವೈದ್ಯಾಧಿಕಾರಿಗಳಾದ ಡಾ: ಸಿ.ಎನ್. ಯೋಗೀಶ್ವರಪ್ಪ, ಸುರೂಪಿಕಾ ಶಸ್ತ್ರ ಚಿಕಿತ್ಸಾ ಶಾಸ್ತ್ರ ಮತ್ತು ಡಾ: ವಿ.ಪಿ. ದಯಾನಂದ, ಅರವಳಿಕೆ ಶಾಸ್ತ್ರ ವಿಭಾಗ ಇವರಿಗೆ ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯಲ್ಲಿ ಖಾಲಿ ಇರುವ ಉಪನ್ಯಾಸಕರ ಹುದ್ದೆಯಲ್ಲಿ ಕೆಲವು ಷರತ್ತಿಗೊಳಪಟ್ಟು ವಿಲೀನಗೊಳಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಕಾರ್ಮಿಕ ಇಲಾಖೆಯು ಮೇಲೆ (4)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯಲ್ಲಿ ಉಪನ್ಯಾಸಕರಾಗಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇಲಾಖೆಯಲ್ಲಿ ವಿಮಾ ವೈದ್ಯಾಧಿಕಾರಿಗಳಾದ ಡಾ: ಸಿ.ಎನ್. ಯೋಗೀಶ್ವರಪ್ಪ, ಪ್ಲಾಸ್ಟಿಕ್ ಸರ್ಜರಿ ವಿಭಾಗ ಮತ್ತು ಡಾ: ವಿ.ಪಿ. ದಯಾನಂದ, ಅರವಳಿಕೆ ಶಾಸ್ತ್ರ ವಿಭಾಗ ಇವರನ್ನು ಕ್ರಮವಾಗಿ ಪ್ಲಾಸ್ಟಿಕ್ ಸರ್ಜರಿ ವಿಭಾಗ ಮತ್ತು ಅರವಳಿಕೆ ಶಾಸ್ತ್ರ ವಿಭಾಗದಲ್ಲಿನ ಉಪನ್ಯಾಸಕರ ಹುದ್ದೆಗಳಲ್ಲಿ ಖಾಯಂ ಆಗಿ ವಿಲೀನಗೊಳಿಸಲು ಅಭ್ಯಂತರವಿಲ್ಲವೆಂದು ತಿಳಿಸಿದೆ.

ನಿರ್ದೇಶಕರು, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ರವರ ಮೇಲೆ (5)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯಲ್ಲಿ ನಿಯೋಜನೆ ಮೇಲೆ ಉಪನ್ಯಾಸಕರುಗಳಾಗಿ ಕರ್ತವ್ಯ ನಿರ್ವಹಿಸುತ್ತಿರುವ ಡಾ: ಸಿ.ಎನ್. ಯೋಗೀಶ್ವರಪ್ಪ, ಪ್ಲಾಸ್ಟಿಕ್ ಸರ್ಜರಿ ವಿಭಾಗ ಮತ್ತು ಡಾ: ವಿ.ಪಿ. ದಯಾನಂದ, ಅರವಳಿಕೆ ಶಾಸ್ತ್ರ ವಿಭಾಗ ಇವರನ್ನು ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯಲ್ಲಿನ ಉಪನ್ಯಾಸಕರ ಹುದ್ದೆಯಲ್ಲಿ ಜೇಷ್ಠತೆಯನ್ನು ನಿರ್ಧರಿಸುವುದಕ್ಕೊಳಪಟ್ಟು ಶಾಶ್ವತವಾಗಿ ವಿಲೀನಗೊಳಿಸಲು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯಲ್ಲಿ ನಿಯೋಜನೆ ಮೇಲೆ ಉಪನ್ಯಾಸಕರುಗಳಾಗಿ ಕರ್ತವ್ಯ ನಿರ್ವಹಿಸುತ್ತಿರುವ ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇಲಾಖೆಯ ವಿಮಾ ವೈದ್ಯಾಧಿಕಾರಿಗಳಾದ ಡಾ: ಸಿ.ಎನ್.ಯೋಗೀಶ್ವರಪ್ಪ, ಪ್ಲಾಸ್ಟಿಕ್ ಸರ್ಜರಿ ವಿಭಾಗ ಮತ್ತು ಡಾ: ವಿ.ಪಿ. ದಯಾನಂದ, ಅರವಳಿಕೆ ಶಾಸ್ತ್ರ ವಿಭಾಗ ಇವರನ್ನು ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯ ಸೇವೆಯಲ್ಲಿ ಖಾಯಂ ಆಗಿ ವಿಲೀನಗೊಳಿಸಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 244 ಎಂಪಿಎಸ್ 2007, ಬೆಂಗಳೂರು, ದಿನಾಂಕ: 24ನೇ ಡಿಸೆಂಬರ್ 2008.**

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1997ರ ನಿಯಮ 16(ಎ)(ii)ರ ಪ್ರಕಾರ ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇಲಾಖೆಯ ಈ ಕೆಳಕಂಡ ವಿಮಾ ವೈದ್ಯಾಧಿಕಾರಿಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರೂ. 8000–13500 ಗಳ ಎ.ಐ.ಸಿ.ಟಿ.ಇ. ವೇತನ ಶ್ರೇಣಿಯ ಉಪನ್ಯಾಸಕರ ಹುದ್ದೆಯಲ್ಲಿ ಸ್ವಾಯತ್ತ ಸಂಸ್ಥೆಯಾದ ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇದರ ಸೇವೆಯಲ್ಲಿ ಖಾಯಂ ಆಗಿ ವಿಲೀನಗೊಳಿಸಲಾಗಿದೆ.

| | | |
|---|---|---|
| 1 | ಡಾ: ಸಿ.ಎನ್. ಯೋಗೀಶ್ವರಪ್ಪ,<br>ಉಪನ್ಯಾಸಕರು (ನಿಯೋಜನೆ ಮೇಲೆ),<br>ಪ್ಲಾಸ್ಟಿಕ್ ಸರ್ಜರಿ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು | ಉಪನ್ಯಾಸಕರು<br>ಪ್ಲಾಸ್ಟಿಕ್ ಸರ್ಜರಿ ವಿಭಾಗ,<br>ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು |
| 2 | ಡಾ: ವಿ.ಪಿ. ದಯಾನಂದ,<br>ಉಪನ್ಯಾಸಕರು (ನಿಯೋಜನೆ ಮೇಲೆ),<br>ಅರವಳಿಕೆ ಶಾಸ್ತ್ರ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು | ಉಪನ್ಯಾಸಕರು<br>ಅರವಳಿಕೆ ಶಾಸ್ತ್ರ ವಿಭಾಗ,<br>ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು |

ಷರತ್ತುಗಳು

1. **Designation & Scale:** On their absorption the teaching staff will be allowed to draw their payand allowances as in the relevant Government order with effect from the date of issue of the Government on absorption.
2. **Pay and Allowance:** On their absorption the teaching staff will be allowed to draw their pay and allowances as in the relevant Government order with effect from the date of issue of the Government order on absorption.
3. **Pension/Family Pension:** Those who have been appointed before 1-4-2006 will be governed by the Pension rules as would have been applicable if they had continued in the Department. In respect of those appointed on or after 1.4.2006, the Contributory Pension Scheme will be applicable.
4. **Superannuation:** The age of superannuation will be as applicable to other Government employees.
5. **Revision of Pay:** As and when the AICTE revises the pay scales, revision will be considered by the Government subject to financial implications.
6. **Leave/Medical benefits:** As per KCSR and Karnataka Government Servants (Medical Attendance) Rules.
7. **Seniority, Service and Conduct Rules:** Separate orders will be issued in consultation with the DPAR.
8. **GPF/KGID/Group Insurance:** As per the relevant rules.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎಸ್ 08, ದಿನಾಂಕ 25–8–2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 128

**ವಿ. ಶ್ರೀರಾಮರೆಡ್ಡಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)

## ಕಂದಾಯ ಸಚಿವಾಲಯ

**ವಿಷಯ :** ಉಡುಪಿ ಜಿಲ್ಲೆ, ಪುತ್ತಿಗೆ ಮಠದ ಅಭಿವೃದ್ಧಿ ಕಾಮಗಾರಿಗೆ ಅನುದಾನವನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಸಿಎನ್‌ಆರ್.2.ಸಿಆರ್.159/ 2008–09, ದಿನಾಂಕ 25–10–2008.

2. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ.1455 ವೆಚ್ಚ–7/2008, ದಿನಾಂಕ 23–12–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಧಾರ್ಮಿಕ ದತ್ತಿ ಆಯುಕ್ತರ ಪತ್ರ ದಿನಾಂಕ 25–10–2008ರಲ್ಲಿ ಸನ್ಮಾನ್ಯ ಮುಖ್ಯಮಂತ್ರಿಯವರು 2008–09ನೇ ಸಾಲಿನ ಆಯವ್ಯಯದ ಚರ್ಚೆಯ ಮೇಲಿನ ಭಾಷಣದ ವೇಳೆಯಲ್ಲಿ ಹೊಸ ಯೋಜನೆಯನ್ನು ಘೋಷಿಸಿದ್ದು, ಇದರಲ್ಲಿ "ಅನ್ನ–ಯಜ್ಞ (ಉಡುಪಿ) ಪುತ್ತಿಗೆ ಮಠಕ್ಕೆ ರೂ. 25.00 ಲಕ್ಷಗಳ ಅನುದಾನ" ಮಂಜೂರು ಮಾಡುವ ಪ್ರಸ್ತಾವನೆ ಒಳಗೊಂಡಿರುತ್ತದೆ.

ಜಿಲ್ಲಾಧಿಕಾರಿಗಳು, ಉಡುಪಿ ಜಿಲ್ಲೆರವರಿಗೆ ಶ್ರೀ ಪುತ್ತಿಗೆ ಮಠದ ಆಡಳಿತ ವರ್ಗವನ್ನು ಸಂಪರ್ಕಿಸಿ ಸದರಿ ಮಠದ ವತಿಯಿಂದ ಕೈಗೊಳ್ಳುವ ಕಾಮಗಾರಿಗಳ ಬಗ್ಗೆ ಪ್ರಸ್ತಾವನೆ ಹಾಗೂ ಅಂದಾಜುಪಟ್ಟಿ ಮತ್ತು ನಕ್ಷೆಯನ್ನು ಧಾರ್ಮಿಕ ದತ್ತಿ

ಆಯುಕ್ತರವರ ಕಛೇರಿಗೆ ಸಲ್ಲಿಸಲು ಕೋರಿ ಪತ್ರ ಬರೆಯಲಾಗಿದೆ. ಆದುದರಿಂದ ಶ್ರೀ ಪುತ್ತಿಗೆ ಮಠಕ್ಕೆ ರೂ. 25.00 ಲಕ್ಷಗಳ ಅನುದಾನವನ್ನು ಮಂಜೂರು ಮಾಡಲು ಹಾಗೂ ಇದಕ್ಕಾಗಿ ಪೂರಕ ಅನುದಾನವನ್ನು ಒದಗಿಸಲು ಕೋರಿಕೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಟಿಪ್ಪಣಿ ದಿನಾಂಕ 23–12–2008ರಲ್ಲಿ ಉಡುಪಿ ಜಿಲ್ಲೆಯ ಅನ್ನ–ಯಜ್ಞ ಪುತ್ತಿಗೆಮಠ ಅಭಿವೃದ್ಧಿಗಾಗಿ ಬೇಕಾದ ರೂ. 25.00 ಲಕ್ಷಗಳನ್ನು ಲೆಕ್ಕಶೀರ್ಷಿಕೆ 2250–00–800–1–03–200 ಅಡಿಯಲ್ಲಿ ಭರಿಸಲು ಆರ್ಥಿಕ ಇಲಾಖೆ ಸಹಮತಿಸಿದೆ ಹಾಗೂ ಈ ಸಂಬಂಧ ಅನುದಾನದ ಕೊರತೆ ಉಂಟಾದರೆ ಆರ್ಥಿಕ ವರ್ಷದ ಅಂತ್ಯಕ್ಕೆ ಹೆಚ್ಚುವರಿ ನೀಡಲು ಪರಿಗಣಿಸಲಾಗುವುದು ಎಂದು ತಿಳಿಸಿದೆ.

ಮೇಲಿನ ವಿವರಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 173 ಮುಅಬಿ 2008, ಬೆಂಗಳೂರು, ದಿನಾಂಕ: 9ನೇ ಜನವರಿ 2009.**

ಉಡುಪಿ ಜಿಲ್ಲೆ, ಅನ್ನ–ಯಜ್ಞ ಪುತ್ತಿಗೆಮಠ ಅಭಿವೃದ್ಧಿ ಕಾರ್ಯಕ್ಕಾಗಿ 2008–09ನೇ ಸಾಲಿನ ಲೆಕ್ಕಶೀರ್ಷಿಕೆ "2250–00–800–1–03–ದೇವಸ್ಥಾನಗಳು ಮತ್ತು ಧಾರ್ಮಿಕ ಸಂಸ್ಥೆಗಳ–200–ನಿರ್ವಹಣೆ (ಯೋಜನೇತರ)"ರಡಿಯಲ್ಲಿ ಒದಗಿಸಲಾದ ಅನುದಾನದಲ್ಲಿ ರೂ. 25.00 ಲಕ್ಷ (ರೂ. ಇಪ್ಪತ್ತೈದು ಲಕ್ಷಗಳು ಮಾತ್ರ)ಗಳನ್ನು ಧಾರ್ಮಿಕ ದತ್ತಿ ಆಯುಕ್ತರು, ಬೆಂಗಳೂರುರವರಿಗೆ ಬಿಡುಗಡೆ ಮಾಡಲಾಗಿದೆ.

ಈ ಯೋಜನೆಗೆ ಸಂಬಂಧಿಸಿದ ಅಂದಾಜುಪಟ್ಟಿಗೆ ಸರ್ಕಾರದಿಂದ ಆಡಳಿತಾತ್ಮಕ ಅನುಮೋದನೆ ಪಡೆದು, ನಂತರ ಕಾಮಗಾರಿಯ ಅನುಷ್ಠಾನಕ್ಕಾಗಿ ಜಿಲ್ಲಾಧಿಕಾರಿಗಳು, ಉಡುಪಿ ಜಿಲ್ಲೆರವರಿಗೆ ಸದರಿ ಅನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಧಾರ್ಮಿಕ ದತ್ತಿ ಆಯುಕ್ತರವರು ಅನುದಾನದ ಬಿಲ್‌ಗೆ ಸಹಿ ಮಾಡುವುದರ ಜೊತೆಗೆ ಮೇಲು ಸಹಿ ಮಾಡಿ, ಸದರಿ ಮೊತ್ತವನ್ನು ಪಡೆದು ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡುವುದು.

ಈ ಆದೇಶದಲ್ಲಿ ಆರ್ಥಿಕ ಇಲಾಖೆಯ ದಿನಾಂಕ 23–12–2008ರ ಟಿಪ್ಪಣಿ ಸಂಖ್ಯೆ: ಆ.ಇ. 1455 ವೆಚ್ಚ–7/2008ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.325

**ಎಲ್.ಎಸ್. ಶ್ರೀಕಂಠಬಾಬು**

ಪೀಠಾಧಿಕಾರಿ

ಕಂದಾಯ ಇಲಾಖೆ (ಮುಜರಾಯಿ)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಕಸಂವಾಪ್ರ 31 ಸ್ಮಾಪ್ರನಿ 2008, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2008.**

ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 31 ಸ್ಮಾಪ್ರನಿ 2008, ದಿನಾಂಕ 16–10–2008ರ ಆದೇಶದ ಭಾಗದಲ್ಲಿ ನೀಡಲಾಗಿರುವ ರೂ. 1.00 ಕೋಟಿಗಳ (ಒಂದು ಕೋಟಿ ರೂಪಾಯಿಗಳು ಮಾತ್ರ) ಮೊತ್ತವನ್ನು "ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ" ಎಂಬುದರ ಬದಲಾಗಿ "ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ" ಎಂದು ದಿನಾಂಕ 16–10–2008 ರಿಂದಲೇ ಜಾರಿಗೆ ಬರುವಂತೆ ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 141

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ**

**ವಿಷಯ:** ಹಾವೇರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಹಾನಗಲ್ ಮತ್ತು ಹಾವೇರಿ ತಾಲ್ಲೂಕುಗಳ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ಉತ್ತರ), ಧಾರವಾಡ, ಇವರ ಪತ್ರಸಂಖ್ಯೆ: ಸಿಬಿಎನ್/ಹೈಆಸೆ/ಕ.ಸಂ.7/ಶಾಸಮ/ಗ್ರಾರಮೇ/ ಹಾವೇರಿ ವಿಭಾಗ/ 08–09/ 06848, ದಿನಾಂಕ: 7–10–2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ಇವರು ಹಾವೇರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಹಾನಗಲ್ ಮತ್ತು ಹಾವೇರಿ ತಾಲ್ಲೂಕುಗಳ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ನಿಗದಿತ ನಮೂನೆಯಲ್ಲಿ ಅಗತ್ಯ ನಕ್ಷೆಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ ಗಳಲ್ಲಿ |
|---|---|---|
| | **ಹಾನಗಲ್ ತಾಲ್ಲೂಕು** | |
| 1 | ಪಡುಬಿದ್ರಿ–ಚಿಕ್ಕಾಲಗುಡ್ಡ ರಾಜ್ಯ ಹೆದ್ದಾರಿ–1ರಿಂದ ನವಲಗುಂದ–ಬನವಾಸಿ–ಮುಗವಳ್ಳಿ ರಾಜ್ಯ ಹೆದ್ದಾರಿ–137ಕ್ಕೆ ಕೂಡುವ ರಸ್ತೆ | 2.50 |
| 2 | ಕೂಡಲ ಕ್ರಾಸ್‌ನಿಂದ ಹಾನಗಲ್ ತಾಲ್ಲೂಕು ಹದ್ದಿನವರೆಗೆ ಕೂಡುವ ರಸ್ತೆ | 1.60 |
| 3 | ಅಕ್ಕಿಆಲೂರ ಗ್ರಾಮ ಪರಿಮಿತಿಯ ರಸ್ತೆ | 1.00 |
| | **ಒಟ್ಟು** | **5.10** |
| | **ಹಾವೇರಿ ತಾಲ್ಲೂಕು** | |
| 4 | ರಾ.ಹೆ–4ರಿಂದ ದೇವಗಿರಿ–ಯಲ್ಲಾಪುರ ಗ್ರಾಮಕ್ಕೆ ಕೂಡುವ ರಸ್ತೆ | 2.00 |
| 5 | ಚಿಕ್ಕಲಿಂಗದಹಳ್ಳಿ–ಹೊಂಬರಡಿ ರಸ್ತೆ | 3.50 |
| 6 | ಯಲ್ಲಗಚ್ಚಿನಿಂದ ಹಳೆರಿತ್ತಿವರೆಗಿನ ಕೂಡು ರಸ್ತೆ | 6.00 |
| 7 | ಯಲ್ಲಗಚ್ಚಿನಿಂದ ಕೋಣನತಂಬಗಿ ಕೂಡು ರಸ್ತೆ | 8.00 |
| | **ಒಟ್ಟು** | **19.50** |

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 639 ಸಿಆರ್‌ಎಂ 2008, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2008**

ಹಾವೇರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಹಾನಗಲ್ ಮತ್ತು ಹಾವೇರಿ ತಾಲ್ಲೂಕುಗಳ ಒಟ್ಟು 24.60 ಕಿ.ಮೀ ಉದ್ದದ ಈ ಕೆಳಕಂಡ 7 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ ಗಳಲ್ಲಿ |
|---|---|---|
| | **ಹಾನಗಲ್ ತಾಲ್ಲೂಕು** | |
| 1 | ಪಡುಬಿದ್ರಿ–ಚಿಕ್ಕಾಲಗುಡ್ಡ ರಾಜ್ಯ ಹೆದ್ದಾರಿ–1ರಿಂದ ನವಲಗುಂದ–ಬನವಾಸಿ–ಮುಗವಳ್ಳಿ ರಾಜ್ಯ ಹೆದ್ದಾರಿ–137ಕ್ಕೆ ಕೂಡುವ ರಸ್ತೆ | 2.50 |
| 2 | ಕೂಡಲ ಕ್ರಾಸ್‌ನಿಂದ ಹಾನಗಲ್ ತಾಲ್ಲೂಕು ಹದ್ದಿನವರೆಗೆ ಕೂಡುವ ರಸ್ತೆ | 1.60 |
| 3 | ಅಕ್ಕಿಆಲೂರ ಗ್ರಾಮ ಪರಿಮಿತಿಯ ರಸ್ತೆ | 1.00 |
| | **ಒಟ್ಟು** | **5.10** |
| | **ಹಾವೇರಿ ತಾಲ್ಲೂಕು** | |
| 4 | ರಾ.ಹೆ–4ರಿಂದ ದೇವಗಿರಿ–ಯಲ್ಲಾಪುರ ಗ್ರಾಮಕ್ಕೆ ಕೂಡುವ ರಸ್ತೆ | 2.00 |

| ಕ್ರ ಸಂ | ಗ್ರಾಮೀಣ ರಸ್ತೆಗಳ ವಿವರ | ಕಿ.ಮೀ ಗಳಲ್ಲಿ |
|---|---|---|
| 5 | ಚಿಕ್ಕಲಿಂಗದಹಳ್ಳಿ-ಹೊಂಬರಡಿ ರಸ್ತೆ | 3.50 |
| 6 | ಯಲ್ಲಗಚ್ಚಿನಿಂದ ಹಳೇರಿತ್ತಿವರೆಗಿನ ಕೂಡು ರಸ್ತೆ | 6.00 |
| 7 | ಯಲ್ಲಗಚ್ಚಿನಿಂದ ಕೋಣನತಂಬಗಿ ಕೂಡು ರಸ್ತೆ | 8.00 |
| | **ಒಟ್ಟು** | **19.50** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 166

**ಎಸ್.ಆರ್. ರೇವಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

**ವಿಷಯ:** ಬೆಂಗಳೂರು ದಕ್ಷಿಣ ಮತ್ತು ಪೂರ್ವ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಅಭಿವೃದ್ಧಿಗೊಂಡಿರುವ ಜಿಲ್ಲಾ ಮುಖ್ಯ ರಸ್ತೆಗಳನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯವರಿಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:** 1) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪತ್ರಸಂಖ್ಯೆ: ಮುಇಂ/ಸಂಕದ/ರಶಾ/ಸಇಂ4/2008-09, ದಿನಾಂಕ: 19-9-2008.

2) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದಕ್ಷಿಣ), ಬೆಂಗಳೂರು, ಇವರ ಪತ್ರಸಂಖ್ಯೆ: ಮುಇಂ/ಸಂಕದ/ಮೇಘ/ಕಿಇಂ/ರಸ್ತೆ ಹಸ್ತಾಂತರ/2008-09, ದಿನಾಂಕ: 13-11-2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ಬೆಂಗಳೂರು ದಕ್ಷಿಣ ಮತ್ತು ಪೂರ್ವ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಅಭಿವೃದ್ಧಿಗೊಂಡಿರುವ ಈ ಕೆಳಕಂಡ ಜಿಲ್ಲಾ ಮುಖ್ಯ ರಸ್ತೆಗಳನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯವರಿಗೆ ಹಸ್ತಾಂತರಿಸುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| ಕ್ರ ಸಂ | ರಸ್ತೆಯ ವಿವರಗಳು | ಉದ್ದ (ಕಿ.ಮೀ) |
|---|---|---|
| 1 | ವಿಮಾನ ನಿಲ್ದಾಣ ರಸ್ತೆ<br>ಅ) ಬೆಂಗಳೂರು ಪೂರ್ವ ತಾಲ್ಲೂಕು ಕುಂದಲಹಳ್ಳಿ ಕ್ರಾಸ್‌ನಿಂದ ವರ್ತೂರು ಕೋಡಿಯವರೆಗೆ(ಬೆಂಗಳೂರು-ವರ್ತೂರು ರಸ್ತೆ ಸರಪಳಿ 14.70 ರಿಂದ 18.32 ಕಿ.ಮೀ ವರೆಗೆ)<br>ಆ) ಬೆಂಗಳೂರು ಪೂರ್ವ ತಾಲ್ಲೂಕು ವರ್ತೂರು ಕೋಡಿಯಿಂದ ಶ್ರೀ ಸತ್ಯ ಸಾಯಿಬಾಬಾ ಆಶ್ರಮದಿಂದ ಬಳಿಯಿರುವ ರೈಲ್ವೆ ಮೇಲು ಸೇತುವೆಯವರೆಗೆ (ಹೊಸಕೋಟೆ-ಕಾಡುಕೋಡಿ-ಆನೇಕಲ್ ರಸ್ತೆ ಸರಪಳಿ 6.00 ಕಿ.ಮೀ ನಿಂದ 11.15 ಕಿ.ಮೀ ವರೆಗೆ) | 3.62<br>4.65 |
| 2 | ಬೆಂಗಳೂರು ದಕ್ಷಿಣ ತಾಲ್ಲೂಕು ಬೆಂಗಳೂರು-ಆನೇಕಲ್-ಬನ್ನೇರುಘಟ್ಟ ರಸ್ತೆ ಜೆ.ಡಿ.ಮರ 4.00 ಕಿ.ಮೀ.ಗಳು ಕ್ರಾಸ್‌ನಿಂದ ಮೀನಾಕ್ಷಿ ದೇವಸ್ಥಾನದವರೆಗೆ (ಬೆಂಗಳೂರು-ಆನೇಕಲ್-ಬನ್ನೇರುಘಟ್ಟ ರಸ್ತೆ ಸರಪಳಿ 9.20 ರಿಂದ 13.20 ಕಿ.ಮೀ.ವರೆಗೆ) | 4.00 |
| 3 | ಬೆಂಗಳೂರು ದೊಮ್ಮಸಂದ್ರ ರಸ್ತೆ ಹೊರವರ್ತುಲ ರಸ್ತೆಯಿಂದ 4.62 ಕಿ.ಮೀಗಳು ರೈಲ್ವೆ ಕ್ರಾಸಿಂಗ್‌ವರೆಗೆ (ಸರಪಳಿ 4.62 ಕಿ.ಮೀ ಗಳು 12.58 ಕಿ.ಮೀ ನಿಂದ 17.20 ಕಿ.ಮೀ ವರೆಗೆ) | 4.62 |
| 4 | ಕುಂದಲಹಳ್ಳಿ ಕ್ರಾಸ್‌ನಿಂದ ಹೂಡಿ ಗ್ರಾಮಕ್ಕೆ ಹೋಗುವ ರಸ್ತೆ | 5.00 |
| 5 | ಕೆ.ಆರ್.ಪುರಂನಿಂದ ಸಾದರಮಂಗಲ ಹೋಪ್ ಫಾರಂ ಮಾರ್ಗವಾಗಿ ಸೌಖ್ಯ ಹೋಲಿಸ್ಟಿಕ್ ಸೆಂಟರ್‌ವರೆಗಿನ ರಸ್ತೆ(ಸರಪಳಿ 3.70 ರಿಂದ 10.75) | 7.05 |
| 6 | ಹೊಸಕೋಟೆ-ಕಾಡುಗೋಡಿ-ಆನೇಕಲ್ ರಸ್ತೆ(ರಾಹೆ-35) ಸರಪಳಿ 11.15 ಕಿ.ಮೀ ನಿಂದ 17.00 ಕಿ.ಮೀ ವರೆಗೆ | 5.85 |

| ಕ್ರ ಸಂ | ರಸ್ತೆಯ ವಿವರಗಳು | ಉದ್ದ (ಕಿ.ಮೀ) |
|---|---|---|
| 7 | ರಾಷ್ಟ್ರೀಯ ಹೆದ್ದಾರಿ-7 ರಿಂದ ಕಸವನಹಳ್ಳಿ ಮಾರ್ಗವಾಗಿ ಬೆಂಗಳೂರು-ದೊಮ್ಮಸಂದ್ರ ರಸ್ತೆಯನ್ನು ಸೇರುವ ರಸ್ತೆ | 6.5 |
| 8 | ರಾಷ್ಟ್ರೀಯ ಹೆದ್ದಾರಿ-7 ರಿಂದ ಕೂಡ್ಲು ಗ್ರಾಮದ ಮಾರ್ಗವಾಗಿ ಬೆಂಗಳೂರು-ದೊಮ್ಮಸಂದ್ರ ರಸ್ತೆಯನ್ನು ಸೇರುವ ರಸ್ತೆ | 6.00 |

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 660 ಸಿಆರ್‌ಎಂ 2008, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2008**

ಬೆಂಗಳೂರು ದಕ್ಷಿಣ ಮತ್ತು ಪೂರ್ವ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಈ ಕೆಳಕಂಡ 8 ಅಭಿವೃದ್ಧಿಗೊಂಡಿರುವ ಜಿಲ್ಲಾ ಮುಖ್ಯ ರಸ್ತೆಗಳನ್ನು ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಯಿಂದ ನಿಯಮಾನುಸಾರ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಹಸ್ತಾಂತರಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ ಸಂ | ರಸ್ತೆಯ ವಿವರಗಳು | ಉದ್ದ (ಕಿ.ಮೀ) |
|---|---|---|
| 1. | ವಿಮಾನ ನಿಲ್ದಾಣ ರಸ್ತೆ<br>ಅ) ಬೆಂಗಳೂರು ಪೂರ್ವ ತಾಲ್ಲೂಕು ಕುಂದಲಹಳ್ಳಿ ಕ್ರಾಸ್‌ನಿಂದ ವರ್ತೂರು ಕೋಡಿಯವರೆಗೆ(ಬೆಂಗಳೂರು-ವರ್ತೂರು ರಸ್ತೆ ಸರಪಳಿ 14.70 ರಿಂದ 18.32 ಕಿ.ಮೀ ವರೆಗೆ)<br>ಆ) ಬೆಂಗಳೂರು ಪೂರ್ವ ತಾಲ್ಲೂಕು ವರ್ತೂರು ಕೋಡಿಯಿಂದ ಶ್ರೀ ಸತ್ಯ ಸಾಯಿಬಾಬಾ ಆಶ್ರಮದಿಂದ ಬಳಿಯಿರುವ ರೈಲ್ವೆ ಮೇಲು ಸೇತುವೆಯವರೆಗೆ (ಹೊಸಕೋಟೆ-ಕಾಡುಕೋಡಿ-ಆನೇಕಲ್ ರಸ್ತೆ ಸರಪಳಿ 6.00 ಕಿ.ಮೀ ನಿಂದ 11.15 ಕಿ.ಮೀ ವರೆಗೆ) | 3.62<br>4.65 |
| 2. | ಬೆಂಗಳೂರು ದಕ್ಷಿಣ ತಾಲ್ಲೂಕು ಬೆಂಗಳೂರು-ಆನೇಕಲ್-ಬನ್ನೇರುಘಟ್ಟ ರಸ್ತೆ ಜೆ.ಡಿ.ಮರ 4.00 ಕಿ.ಮೀ.ಗಳು ಕ್ರಾಸ್‌ನಿಂದ ಮೀನಾಕ್ಷಿ ದೇವಸ್ಥಾನದವರೆಗೆ (ಬೆಂಗಳೂರು-ಆನೇಕಲ್-ಬನ್ನೇರುಘಟ್ಟ ರಸ್ತೆ ಸರಪಳಿ 9.20 ರಿಂದ 13.20 ಕಿ.ಮೀ.ವರೆಗೆ) | 4.00 |
| 3. | ಬೆಂಗಳೂರು ದೊಮ್ಮಸಂದ್ರ ರಸ್ತೆ ಹೊರವರ್ತುಲ ರಸ್ತೆಯಿಂದ 4.62 ಕಿ.ಮೀಗಳು ರೈಲ್ವೆ ಕ್ರಾಸಿಂಗ್‌ವರೆಗೆ (ಸರಪಳಿ 4.62 ಕಿ.ಮೀ ಗಳು 12.58 ಕಿ.ಮೀ ನಿಂದ 17.20 ಕಿ.ಮೀ ವರೆಗೆ) | 4.62 |
| 4. | ಕುಂದಲಹಳ್ಳಿ ಕ್ರಾಸ್‌ನಿಂದ ಹೂಡಿ ಗ್ರಾಮಕ್ಕೆ ಹೋಗುವ ರಸ್ತೆ | 5.00 |
| 5. | ಕೆ.ಆರ್.ಪುರಂನಿಂದ ಸಾದರಮಂಗಲ ಹೋಪ್ ಫಾರಂ ಮಾರ್ಗವಾಗಿ ಸೌಖ್ಯ ಹೋಲಿಸ್ಟಿಕ್ ಸೆಂಟರ್‌ವರೆಗಿನ ರಸ್ತೆ(ಸರಪಳಿ 3.70 ರಿಂದ 10.75) | 7.05 |
| 6. | ಹೊಸಕೋಟೆ-ಕಾಡುಗೋಡಿ-ಆನೇಕಲ್ ರಸ್ತೆ(ರಾಹೆ-35) ಸರಪಳಿ 11.15 ಕಿ.ಮೀ ನಿಂದ 17.00 ಕಿ.ಮೀ ವರೆಗೆ | 5.85 |
| 7. | ರಾಷ್ಟ್ರೀಯ ಹೆದ್ದಾರಿ-7 ರಿಂದ ಕಸವನಹಳ್ಳಿ ಮಾರ್ಗವಾಗಿ ಬೆಂಗಳೂರು-ದೊಮ್ಮಸಂದ್ರ ರಸ್ತೆಯನ್ನು ಸೇರುವ ರಸ್ತೆ | 6.5 |
| 8. | ರಾಷ್ಟ್ರೀಯ ಹೆದ್ದಾರಿ-7 ರಿಂದ ಕೂಡ್ಲು ಗ್ರಾಮದ ಮಾರ್ಗವಾಗಿ ಬೆಂಗಳೂರು-ದೊಮ್ಮಸಂದ್ರ ರಸ್ತೆಯನ್ನು ಸೇರುವ ರಸ್ತೆ | 6.00 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 167

**ಎಸ್.ಆರ್. ರೇವಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಕರ್ನಾಟಕ ಲೋಕ ಸೇವಾ ಆಯೋಗದ ಪ್ರಾಂತೀಯ ಕಛೇರಿಯನ್ನು ಶಿವಮೊಗ್ಗದಲ್ಲಿ ತೆರೆಯುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 64 ಸೇಲೋಸೇ 93, ದಿನಾಂಕ 21–7–1994.

2) ಅಧ್ಯಕ್ಷರು ಕರ್ನಾಟಕ ಲೋಕ ಸೇವಾ ಆಯೋಗ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಆಡಳಿತ 976/08–09/ಪಿಎಸ್‌ಸಿ, ದಿನಾಂಕ 22–8–2008.

**ಆದೇಶ ಸಂಖ್ಯೆ: ಸಿಆಸುಇ 67 ಸೇಲೋಸೇ 2008, ಬೆಂಗಳೂರು, ದಿನಾಂಕ 20ನೇ ಜನವರಿ 2009**

**ಪ್ರಸ್ತಾವನೆ :**

ಉಲ್ಲೇಖ (1)ರಲ್ಲಿನ ಸರ್ಕಾರಿ ಆದೇಶದಲ್ಲಿ ಸರ್ಕಾರವು ಸಾರ್ವಜನಿಕರ ಹಾಗೂ ಅಭ್ಯರ್ಥಿಗಳ ಕೋರಿಕೆಯ ಮೇರೆಗೆ ಗುಲಬರ್ಗಾ, ಬೆಳಗಾಂ ಮತ್ತು ಮೈಸೂರು ನಗರಗಳಲ್ಲಿ ಕರ್ನಾಟಕ ಲೋಕ ಸೇವಾ ಆಯೋಗದ ಪ್ರಾಂತೀಯ ಕಛೇರಿಯನ್ನು ಸ್ಥಾಪಿಸಲು ಅನುಮತಿ ನೀಡಲಾಗಿತ್ತು.

ಕರ್ನಾಟಕ ಲೋಕ ಸೇವಾ ಆಯೋಗದ ಪ್ರಾಂತೀಯ ಕಛೇರಿಯನ್ನು ಶಿವಮೊಗ್ಗದಲ್ಲಿ ತೆರೆಯುವುದರಿಂದ, ಶಿವಮೊಗ್ಗ ಚಿಕ್ಕಮಗಳೂರು, ದಾವಣಗೆರೆ, ಚಿತ್ರದುರ್ಗ, ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಗಳ ಅಭ್ಯರ್ಥಿಗಳಿಗೆ ಹಾಗೂ ಸಾರ್ವಜನಿಕರಿಗೆ ಪ್ರಯೋಜನ ಉಂಟಾಗಲಿದೆ ಎಂದು ಜೊತೆಗೆ ಮೇಲೆ ಸೂಚಿಸಿದ ಜಿಲ್ಲೆಗಳ ಅಭ್ಯರ್ಥಿಗಳು ಮೈಸೂರು ಪ್ರಾಂತೀಯ ಕಛೇರಿಯನ್ನು ಸಂಪರ್ಕಿಸುವುದನ್ನು ತಪ್ಪಿಸಬಹುದೆಂದು, ಲೋಕ ಸೇವಾ ಆಯೋಗವು ತಿಳಿಸುತ್ತಾ, ಶಿವಮೊಗ್ಗದಲ್ಲಿ ಆಯೋಗದ ಪ್ರಾಂತೀಯ ಕಛೇರಿಯನ್ನು ತೆರೆಯಲು ಹಾಗೂ ಅದರ ಕಾರ್ಯನಿರ್ವಹಣೆಗೆ ಸಹಾಯಕ ಕಾರ್ಯದರ್ಶಿ–1, ಶಾಖಾಧಿಕಾರಿ–1, ಸಹಾಯಕರು–1, ಕಿರಿಯ ಸಹಾಯಕರು–2, ಬೆರಳಚ್ಚುಗಾರರು–1 ಮತ್ತು ಗ್ರೂಪ್ 'ಡಿ'–2, ಒಟ್ಟು 8 ಹುದ್ದೆಗಳನ್ನು ಶೀಘ್ರವಾಗಿ ಮಂಜೂರು ಮಾಡುವಂತೆ ಆಯೋಗವು ಉಲ್ಲೇಖ (2)ರಲ್ಲಿನ ಅರೆ ಸರ್ಕಾರಿ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಲೋಕ ಸೇವಾ ಆಯೋಗದ ಪ್ರಸ್ತಾವನೆಯಂತೆ ಶಿವಮೊಗ್ಗದಲ್ಲಿ ಅದರ ಪ್ರಾಂತೀಯ ಕಛೇರಿಯನ್ನು ಸ್ಥಾಪಿಸಲು ಅನುಮತಿ ನೀಡಲಾಗಿದೆ ಹಾಗೂ ಈ ಕಛೇರಿಗೆ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿದೆ:

| | |
|---|---|
| **ಗ್ರೂಪ್ 'ಎ' ಕಿರಿಯ ಶ್ರೇಣಿ** | |
| ಸಹಾಯಕ ಕಾರ್ಯದರ್ಶಿ | –01 |
| **ಗ್ರೂಪ್ 'ಬಿ'** | |
| ಶಾಖಾಧಿಕಾರಿ | –01 |
| **ಗ್ರೂಪ್ 'ಸಿ'** | |
| ಸಹಾಯಕರು | –01 |
| ಕಿರಿಯ ಸಹಾಯಕರು | –02 |
| ಬೆರಳಚ್ಚುಗಾರರು | –01 |
| **ಗ್ರೂಪ್ 'ಡಿ'** | –02 |
| | **–08** |

ಈ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ: ಆಇ 2113 ವೆಚ್ಚ: 5/2008, ದಿನಾಂಕ 13–11–2008ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 514

**ದೇವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾ ನಿಯಮಗಳು–1)

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ**

**ವಿಷಯ:** ಲೆಕ್ಕಶೀರ್ಷಿಕೆ 5054 ಯೋಜನೆ ಅಡಿಯಲ್ಲಿ ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪೂರ ತಾಲ್ಲೂಕಿನ ರಾಜ್ಯ ಹೆದ್ದಾರಿ ಕಾಮಗಾರಿಗಳ ಅಂದಾಜು ಪತ್ರಿಕೆಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರ ಪತ್ರಸಂಖ್ಯೆ: ಸಿಇಎನ್/ತಾಂಸ–1/ಕಿ.ಇಂ–1/5054/ಅಂಪ/08–09/08928, ದಿನಾಂಕ: 27–11–2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ಇವರು ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪೂರ ತಾಲ್ಲೂಕಿನ ಈ ಕೆಳಕಂಡ 4 ರಸ್ತೆ ಅಭಿವೃದ್ಧಿ ಕಾಮಗಾರಿಗಳ ಅಂದಾಜು ಪತ್ರಿಕೆಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ ಸಂ | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|
| 1 | ಉತ್ತರ ಕನ್ನಡ ಜಿಲ್ಲೆ ಸಿದ್ದಾಪೂರ ತಾಲ್ಲೂಕಿನ ಭಟ್ಕಳ ಸೊರಬ ರಾಜ್ಯ ಹೆದ್ದಾರಿ ಅಭಿವೃದ್ಧಿ | 49.50 |
| 2 | ಉತ್ತರ ಕನ್ನಡ ಜಿಲ್ಲೆ ಸಿದ್ದಾಪೂರ ತಾಲ್ಲೂಕಿನ ಸೊಣಗಿಮನೆ ಉಂಚಳ್ಳಿ ಫಾಲ್ಸ್ ರಾಜ್ಯ ಹೆದ್ದಾರಿ ಅಭಿವೃದ್ಧಿ | 49.85 |
| 3 | ಉತ್ತರ ಕನ್ನಡ ಜಿಲ್ಲೆ ಸಿದ್ದಾಪೂರ ತಾಲ್ಲೂಕಿನ ಹೊನ್ನಾವರ–ಮೆಣಸಿ ರಾಜ್ಯ ಹೆದ್ದಾರಿ ಅಭಿವೃದ್ಧಿ | 49.50 |
| 4 | ಉತ್ತರ ಕನ್ನಡ ಜಿಲ್ಲೆ ಸಿದ್ದಾಪೂರ ತಾಲ್ಲೂಕಿನ ಖಾನಾಪೂರ ತಾಳಗುಪ್ಪ ರಾಜ್ಯ ಹೆದ್ದಾರಿ 196.00 ಕಿ.ಮೀ ನಿಂದ 201.00 ಕಿ.ಮೀ ವರೆಗೆ ಅಭಿವೃದ್ಧಿ | 49.60 |

ಈ ಕಾಮಗಾರಿಗಳು 2008–09ನೇ ಸಾಲಿನ ಆಯವ್ಯಯದ ಅಪೆಂಡಿಕ್ಸ್–ಇ ನಲ್ಲಿ ತಲಾ ರೂ.50.00 ಲಕ್ಷಗಳ ಅಂದಾಜಿನೊಂದಿಗೆ ಸೇರ್ಪಡೆಗೊಂಡಿದ್ದು, ಪ್ರಸಕ್ತ 2008–09ನೇ ಸಾಲಿಗೆ ರೂ.15.00 ಲಕ್ಷಗಳ ಅನುದಾನ ಅವಕಾಶ ಕಲ್ಪಿಸಲಾಗಿದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 689 ಸಿಆರ್‌ಎಂ 2008, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2008**

ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪೂರ ತಾಲ್ಲೂಕಿನ ಈ ಕೆಳಕಂಡ 4 ರಸ್ತೆ ಅಭಿವೃದ್ಧಿ ಕಾಮಗಾರಿಗಳ ಅಂದಾಜು ಪತ್ರಿಕೆಗಳಿಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

| ಕ್ರ ಸಂ | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|
| 1 | ಉತ್ತರ ಕನ್ನಡ ಜಿಲ್ಲೆ ಸಿದ್ದಾಪೂರ ತಾಲ್ಲೂಕಿನ ಭಟ್ಕಳ ಸೊರಬ ರಾಜ್ಯ ಹೆದ್ದಾರಿ ಅಭಿವೃದ್ಧಿ | 49.50 |
| 2 | ಉತ್ತರ ಕನ್ನಡ ಜಿಲ್ಲೆ ಸಿದ್ದಾಪೂರ ತಾಲ್ಲೂಕಿನ ಸೊಣಗಿಮನೆ ಉಂಚಳ್ಳಿ ಫಾಲ್ಸ್ ರಾಜ್ಯ ಹೆದ್ದಾರಿ ಅಭಿವೃದ್ಧಿ | 49.85 |
| 3 | ಉತ್ತರ ಕನ್ನಡ ಜಿಲ್ಲೆ ಸಿದ್ದಾಪೂರ ತಾಲ್ಲೂಕಿನ ಹೊನ್ನಾವರ–ಮೆಣಸಿ ರಾಜ್ಯ ಹೆದ್ದಾರಿ ಅಭಿವೃದ್ಧಿ | 49.50 |
| 4 | ಉತ್ತರ ಕನ್ನಡ ಜಿಲ್ಲೆ ಸಿದ್ದಾಪೂರ ತಾಲ್ಲೂಕಿನ ಖಾನಾಪೂರ ತಾಳಗುಪ್ಪ ರಾಜ್ಯ ಹೆದ್ದಾರಿ 196.00 ಕಿ.ಮೀ ನಿಂದ 201.00 ಕಿ.ಮೀ ವರೆಗೆ ಅಭಿವೃದ್ಧಿ | 49.60 |

ಈ ಆಡಳಿತಾತ್ಮಕ ಅನುಮೋದನೆಯು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

1) ಮೇಲ್ಕಂಡ ಕಾಮಗಾರಿಗಳನ್ನು ಕರ್ನಾಟಕ ಪಾರದರ್ಶಕತೆ ಅಧಿನಿಯಮ ಮತ್ತು ಕರ್ನಾಟಕ ಪಾರದರ್ಶಕತೆ ನಿಯಮಗಳ ಉಪಬಂಧಗಳ ಪ್ರಕಾರವೇ ಕೈಗೊಳ್ಳತಕ್ಕದ್ದು.
2) ಕಾಮಗಾರಿಗಳನ್ನು ಕೂಡಲೇ ಕೈಗೆತ್ತಿಕೊಂಡು ತ್ವರಿತವಾಗಿ ಪೂರ್ಣಗೊಳಿಸತಕ್ಕದ್ದು.

3) ಕಾಮಗಾರಿಗಳ ವೆಚ್ಚವು ಯಾವುದೇ ಕಾರಣಕ್ಕಾಗಿ ಅನುಮೋದಿತ ಅಂದಾಜು ಮೊತ್ತವನ್ನು ಮೀರತಕ್ಕದ್ದಲ್ಲ.
4) ಈ ಕಾಮಗಾರಿಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ 5054 ರಸ್ತೆ ಮತ್ತು ಸೇತುವೆಗಳು ಅಡಿಯಲ್ಲಿ ಈ ಉದ್ದೇಶಕ್ಕಾಗಿ ಒದಗಿಸಲಾಗಿರುವ ಅನುದಾನದಲ್ಲಿ ಭರಿಸತಕ್ಕದ್ದು.
5) ಕಾರ್ಯನಿರ್ವಾಹಕ ಇಂಜಿನಿಯರ್ ಮತ್ತು ಅಧೀಕ್ಷಕ ಇಂಜಿನಿಯರ್ ಈ ಕಾಮಗಾರಿಗಳನ್ನು ಖುದ್ದಾಗಿ ಪರಿವೀಕ್ಷಿಸಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಪೂರ್ಣಗೊಳಿಸಲು ಎಲ್ಲಾ ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 168

**ಎಸ್.ಆರ್. ರೇವಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

**ವಿಷಯ:** 2008-09ನೇ ಸಾಲಿನ ಆಯವ್ಯಯದಲ್ಲಿ ಸೇರ್ಪಡೆಗೊಂಡಿರುವ ಚಿತ್ರದುರ್ಗ ಜಿಲ್ಲೆ, ಹಿರಿಯೂರು-ಹೊಸದುರ್ಗ ತಾಲ್ಲೂಕಿನ ರಸ್ತೆ ಅಭಿವೃದ್ಧಿ ಕಾಮಗಾರಿಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದಕ್ಷಿಣ), ಬೆಂಗಳೂರು, ಇವರ ಪತ್ರಸಂಖ್ಯೆ: ಮುಇಂ/ಸಂಕದ/ರಶಾ/ಸಇಂ3/2008-09, ದಿನಾಂಕ: 11-12-2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ಚಿತ್ರದುರ್ಗ ಜಿಲ್ಲೆ, ಹಿರಿಯೂರು-ಹೊಸದುರ್ಗ ತಾಲ್ಲೂಕಿನ ಈ ಕೆಳಕಂಡ 9 ರಸ್ತೆಗಳ ಅಭಿವೃದ್ಧಿ ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ ಸಂ | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|
| 1 | ರಾಜ್ಯ ಹೆದ್ದಾರಿ-24ರಿಂದ ಶಿರಾ ಗಡಿ ರಸ್ತೆ ಮಾರ್ಗ ಟಿ.ನಾಗೇನಹಳ್ಳಿ ರಸ್ತೆಯ 19.00 ಕಿ.ಮೀ ನಿಂದ 22.60 ಕಿ.ಮೀ ವರೆಗೆ ಅಭಿವೃದ್ಧಿ ಮತ್ತು ಡಾಂಬರೀಕರಣ. | 60.00 |
| 2 | ಮ್ಯಾಕಲೂರಹಳ್ಳಿ ಸೊಂಡೆಕೆರೆ ರಸ್ತೆಯ 0.00 ಕಿ.ಮೀ ನಿಂದ 10.80 ಕಿ.ಮೀ ವರೆಗೆ ಅಭಿವೃದ್ಧಿ ಮತ್ತು ಡಾಂಬರೀಕರಣ | 100.00 |
| 3 | ಮೇಟಕುರ್ಕೆ ಶಿಡ್ಲಯ್ಯನ ಕೋಟೆ ರಸ್ತೆಯ ಸರಪಳಿ 0.00 ರಿಂದ 5.00 ಕಿ.ಮೀ ವರೆಗೆ ರಸ್ತೆ ಅಭಿವೃದ್ಧಿ ಮತ್ತು ಡಾಂಬರೀಕರಣ | 50.00 |
| 4 | ಪಿಟ್ಲಾಲಿಯಿಂದ ರಾಷ್ಟ್ರೀಯ ಹೆದ್ದಾರಿ-4ರ ಮಾರ್ಗ ಕಸ್ತೂರಿ ರಂಗಪ್ಪನಹಳ್ಳಿ ರಸ್ತೆಯ 2.00 ಕಿ.ಮೀ ನಿಂದ 6.70 ಕಿ.ಮೀ ಅಭಿವೃದ್ಧಿ ಮತ್ತು ಡಾಂಬರೀಕರಣ. | 75.00 |
| 5 | ಮರಡಿಹಳ್ಳಿ ರಾಜ್ಯ ಗಡಿಯವರೆಗೆ ರಸ್ತೆಯ ಮಾರ್ಗ ಎಂ.ಡಿ.ಕೋಟೆ ರಂಗೇನಹಳ್ಳಿ ರಸ್ತೆಯ 22.00 ಕಿ.ಮೀ ನಿಂದ 25.00 ಕಿ.ಮೀ ವರೆಗೆ ರಸ್ತೆ ಅಭಿವೃದ್ಧಿ ಮತ್ತು ಡಾಂಬರೀಕರಣ | 75.00 |
| 6 | ಮರಡಿಹಳ್ಳಿ ರಾಜ್ಯ ಗಡಿಯವರೆಗೆ ರಸ್ತೆಯ ಮಾರ್ಗ ಎಂ.ಡಿ.ಕೋಟೆ ರಂಗೇನಹಳ್ಳಿ ರಸ್ತೆಯ 27.00 ಕಿ.ಮೀ ನಿಂದ 31.00 ಕಿ.ಮೀ ವರೆಗೆ ರಸ್ತೆ ಅಭಿವೃದ್ಧಿ ಮತ್ತು ಡಾಂಬರೀಕರಣ | 80.00 |
| 7 | ಮಂಡ್ಯ ಹಡಗಲಿ ರಸ್ತೆ(ರಾಜ್ಯ ಹೆದ್ದಾರಿ-47) 237.60 ಕಿ.ಮೀ ನಿಂದ 240.20 ಮತ್ತು 240.80 ಕಿ.ಮೀ ನಿಂದ 243.00 ಕಿ.ಮೀ ವರೆಗೆ ರಸ್ತೆ ಅಭಿವೃದ್ಧಿ ಮತ್ತು ಡಾಂಬರೀಕರಣ | 200.00 |
| 8 | ಮಂಡ್ಯ ಹಡಗಲಿ ರಸ್ತೆ(ರಾಜ್ಯ ಹೆದ್ದಾರಿ-47) 178.31 ಕಿ.ಮೀ ನಿಂದ 226.245 ಕಿ.ಮೀ ವರೆಗೆ ಆಯ್ದ ಭಾಗಗಳಲ್ಲಿ ರಸ್ತೆ ಅಗಲೀಕರಣ ಮತ್ತು ಅಭಿವೃದ್ಧಿ | 200.00 |
| 9 | ತರೀಕೆರೆ ಹೊಸದುರ್ಗ-ವಿವಿ ಪುರ ರಸ್ತೆ 34.00 ಕಿ.ಮೀ ನಿಂದ 80.53 ಕಿ.ಮೀ ವರೆಗೆ ಆಯ್ದಭಾಗಗಳಲ್ಲಿ ರಸ್ತೆ ಅಗಲೀಕರಣ (ರಾಹೆ-24) ಮತ್ತು ಅಭಿವೃದ್ಧಿ | 300.00 |

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 715 ಸಿಆರ್‌ಎಂ 2008, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2008**

ಚಿತ್ರದುರ್ಗ ಜಿಲ್ಲೆ, ಹಿರಿಯೂರು–ಹೊಸದುರ್ಗ ತಾಲ್ಲೂಕಿನ ಈ ಕೆಳಕಂಡ 9 ರಸ್ತೆಗಳ ಅಭಿವೃದ್ಧಿ ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

| ಕ್ರ ಸಂ | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|
| 1 | ರಾಜ್ಯ ಹೆದ್ದಾರಿ–24ರಿಂದ ಶಿರಾ ಗಡಿ ರಸ್ತೆ ಮಾರ್ಗ ಟಿ.ನಾಗೇನಹಳ್ಳಿ ರಸ್ತೆಯ 19.00 ಕಿ.ಮೀ ನಿಂದ 22.60 ಕಿ.ಮೀ ವರೆಗೆ ಅಭಿವೃದ್ಧಿ ಮತ್ತು ಡಾಂಬರೀಕರಣ. | 60.00 |
| 2 | ಮ್ಯಾಕಲೂರಹಳ್ಳಿ ಸೊಂಡೆಕೆರೆ ರಸ್ತೆಯ 0.00 ಕಿ.ಮೀ ನಿಂದ 10.80 ಕಿ.ಮೀ ವರೆಗೆ ಅಭಿವೃದ್ಧಿ ಮತ್ತು ಡಾಂಬರೀಕರಣ | 100.00 |
| 3 | ಮೇಟಕುರ್ಕೆ ಶಿಡ್ಲಯ್ಯನ ಕೋಟೆ ರಸ್ತೆಯ ಸರಪಳಿ 0.00 ರಿಂದ 5.00 ಕಿ.ಮೀ ವರೆಗೆ ರಸ್ತೆ ಅಭಿವೃದ್ಧಿ ಮತ್ತು ಡಾಂಬರೀಕರಣ | 50.00 |
| 4 | ಪಿಟ್ಲಾಲಿಯಿಂದ ರಾಷ್ಟ್ರೀಯ ಹೆದ್ದಾರಿ–4ರ ಮಾರ್ಗ ಕಸ್ತೂರಿ ರಂಗಪ್ಪನಹಳ್ಳಿ ರಸ್ತೆಯ 2.00 ಕಿ.ಮೀ ನಿಂದ 6.70 ಕಿ.ಮೀ ಅಭಿವೃದ್ಧಿ ಮತ್ತು ಡಾಂಬರೀಕರಣ. | 75.00 |
| 5 | ಮರಡಿಹಳ್ಳಿ ರಾಜ್ಯ ಗಡಿಯವರೆಗೆ ರಸ್ತೆಯ ಮಾರ್ಗ ಎಂ.ಡಿ.ಕೋಟೆ ರಂಗೇನಹಳ್ಳಿ ರಸ್ತೆಯ 22.00 ಕಿ.ಮೀ ನಿಂದ 25.00 ಕಿ.ಮೀ ವರೆಗೆ ರಸ್ತೆ ಅಭಿವೃದ್ಧಿ ಮತ್ತು ಡಾಂಬರೀಕರಣ | 75.00 |
| 6 | ಮರಡಿಹಳ್ಳಿ ರಾಜ್ಯ ಗಡಿಯವರೆಗೆ ರಸ್ತೆಯ ಮಾರ್ಗ ಎಂ.ಡಿ.ಕೋಟೆ ರಂಗೇನಹಳ್ಳಿ ರಸ್ತೆಯ 27.00 ಕಿ.ಮೀ ನಿಂದ 31.00 ಕಿ.ಮೀ ವರೆಗೆ ರಸ್ತೆ ಅಭಿವೃದ್ಧಿ ಮತ್ತು ಡಾಂಬರೀಕರಣ | 80.00 |
| 7 | ಮಂಡ್ಯ ಹಡಗಲಿ ರಸ್ತೆ(ರಾಜ್ಯ ಹೆದ್ದಾರಿ–47) 237.60 ಕಿ.ಮೀ ನಿಂದ 240.20 ಮತ್ತು 240.80 ಕಿ.ಮೀ ನಿಂದ 243.00 ಕಿ.ಮೀ ವರೆಗೆ ರಸ್ತೆ ಅಭಿವೃದ್ಧಿ ಮತ್ತು ಡಾಂಬರೀಕರಣ | 200.00 |
| 8 | ಮಂಡ್ಯ ಹಡಗಲಿ ರಸ್ತೆ(ರಾಜ್ಯ ಹೆದ್ದಾರಿ–47) 178.31 ಕಿ.ಮೀ ನಿಂದ 226.245 ಕಿ.ಮೀ ವರೆಗೆ ಆಯ್ದ ಭಾಗಗಳಲ್ಲಿ ರಸ್ತೆ ಅಗಲೀಕರಣ ಮತ್ತು ಅಭಿವೃದ್ಧಿ | 200.00 |
| 9 | ತರೀಕೆರೆ ಹೊಸದುರ್ಗ–ವಿವಿ ಪುರ ರಸ್ತೆ 34.00 ಕಿ.ಮೀ ನಿಂದ 80.53 ಕಿ.ಮೀ ವರೆಗೆ ಆಯ್ದಭಾಗಗಳಲ್ಲಿ ರಸ್ತೆ ಅಗಲೀಕರಣ (ರಾಹೆ–24) ಮತ್ತು ಅಭಿವೃದ್ಧಿ | 300.00 |

ಈ ಆಡಳಿತಾತ್ಮಕ ಅನುಮೋದನೆಯು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

1) ಮೇಲ್ಕಂಡ ಕಾಮಗಾರಿಗಳನ್ನು ಕರ್ನಾಟಕ ಪಾರದರ್ಶಕತೆ ಅಧಿನಿಯಮ ಮತ್ತು ಕರ್ನಾಟಕ ಪಾರದರ್ಶಕತೆ ನಿಯಮಗಳ ಉಪಬಂಧಗಳ ಪ್ರಕಾರವೇ ಕೈಗೊಳ್ಳತಕ್ಕದ್ದು.
2) ಕಾಮಗಾರಿಗಳನ್ನು ಕೂಡಲೇ ಕೈಗೆತ್ತಿಕೊಂಡು ತ್ವರಿತವಾಗಿ ಪೂರ್ಣಗೊಳಿಸತಕ್ಕದ್ದು.
3) ಕಾಮಗಾರಿಗಳ ವೆಚ್ಚವು ಯಾವುದೇ ಕಾರಣಕ್ಕಾಗಿ ಅನುಮೋದಿತ ಅಂದಾಜು ಮೊತ್ತವನ್ನು ಮೀರತಕ್ಕದ್ದಲ್ಲ.
4) ಈ ಕಾಮಗಾರಿಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ 5054 ರಸ್ತೆ ಮತ್ತು ಸೇತುವೆಗಳು ಅಡಿಯಲ್ಲಿ ಈ ಉದ್ದೇಶಕ್ಕಾಗಿ ಒದಗಿಸಲಾಗಿರುವ ಅನುದಾನದಲ್ಲಿ ಭರಿಸತಕ್ಕದ್ದು.
5) ಕಾರ್ಯನಿರ್ವಾಹಕ ಇಂಜಿನಿಯರ್ ಮತ್ತು ಅಧೀಕ್ಷಕ ಇಂಜಿನಿಯರ್ ಈ ಕಾಮಗಾರಿಗಳನ್ನು ಖುದ್ದಾಗಿ ಪರಿವೀಕ್ಷಿಸಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಪೂರ್ಣಗೊಳಿಸಲು ಎಲ್ಲಾ ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 169

**ಎಸ್.ಆರ್. ರೇವಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

**ವಿಷಯ:** 2008-09ನೇ ಸಾಲಿನ ಆಯವ್ಯಯದಲ್ಲಿ ಸೇರ್ಪಡೆಗೊಂಡಿರುವ ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲ್ಲೂಕಿನ ರಸ್ತೆ ಅಭಿವೃದ್ಧಿ ಕಾಮಗಾರಿಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪತ್ರಸಂಖ್ಯೆ: ಮುಇಂ/ಸಂಕದ/ಸಾಕೋ/ಸಇಂ2/2008-09, ದಿನಾಂಕ: 15-12-2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲ್ಲೂಕಿನ ಈ ಕೆಳಕಂಡ 2 ರಸ್ತೆಗಳ ಅಭಿವೃದ್ಧಿ ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ ಸಂ | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|
| 1 | ರಾಜ್ಯ ಹೆದ್ದಾರಿ-27ರ ವಿರಾಜಪೇಟೆ ಬೈಂದೂರು ರಸ್ತೆ ಅಭಿವೃದ್ಧಿ ಕಾಮಗಾರಿ(ವಸ್ತಾರೆ-ಕೊಪ್ಪ ರಸ್ತೆ-ಬಾಳೆ ಹೊನ್ನೂರು ಜಯಪುರ ಕೊಪ್ಪ ಶೃಂಗೇರಿ ಮಾರ್ಗ) | 250.00 |
| 2 | ಜಯಪುರ ಕೊಪ್ಪ ರಸ್ತೆ ಅಭಿವೃದ್ಧಿ ಕಾಮಗಾರಿ | 200.00 |

ಮೇಲ್ಕಂಡ ಕಾಮಗಾರಿಗಳು 2008-09ನೇ ಸಾಲಿನ ಆಯವ್ಯಯದ ಅಪೆಂಡಿಕ್ಸ್-ಇ ನಲ್ಲಿ ಸೇರ್ಪಡೆಗೊಂಡಿವೆ. ಈ ಹಿನ್ನೆಲೆಯಲ್ಲಿ, ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದಕ್ಷಿಣ), ಬೆಂಗಳೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 725 ಸಿಆರ್‌ಎಂ 2008, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2008**

ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲ್ಲೂಕಿನ ಈ ಕೆಳಕಂಡ 2 ರಸ್ತೆಗಳ ಅಭಿವೃದ್ಧಿ ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

| ಕ್ರ ಸಂ | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|
| 1. | ರಾಜ್ಯ ಹೆದ್ದಾರಿ-27ರ ವಿರಾಜಪೇಟೆ ಬೈಂದೂರು ರಸ್ತೆ ಅಭಿವೃದ್ಧಿ ಕಾಮಗಾರಿ(ವಸ್ತಾರೆ-ಕೊಪ್ಪ ರಸ್ತೆ-ಬಾಳೆ ಹೊನ್ನೂರು ಜಯಪುರ ಕೊಪ್ಪ ಶೃಂಗೇರಿ ಮಾರ್ಗ) | 250.00 |
| 2. | ಜಯಪುರ ಕೊಪ್ಪ ರಸ್ತೆ ಅಭಿವೃದ್ಧಿ ಕಾಮಗಾರಿ | 200.00 |

ಈ ಆಡಳಿತಾತ್ಮಕ ಅನುಮೋದನೆಯು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

1) ಮೇಲ್ಕಂಡ ಕಾಮಗಾರಿಗಳನ್ನು ಕರ್ನಾಟಕ ಪಾರದರ್ಶಕತೆ ಅಧಿನಿಯಮ ಮತ್ತು ಕರ್ನಾಟಕ ಪಾರದರ್ಶಕತೆ ನಿಯಮಗಳ ಉಪಬಂಧಗಳ ಪ್ರಕಾರವೇ ಕೈಗೊಳ್ಳತಕ್ಕದ್ದು.
2) ಕಾಮಗಾರಿಗಳನ್ನು ಕೂಡಲೇ ಕೈಗೆತ್ತಿಕೊಂಡು ತ್ವರಿತವಾಗಿ ಪೂರ್ಣಗೊಳಿಸತಕ್ಕದ್ದು.
3) ಕಾಮಗಾರಿಗಳ ವೆಚ್ಚವು ಯಾವುದೇ ಕಾರಣಕ್ಕಾಗಿ ಅನುಮೋದಿತ ಅಂದಾಜು ಮೊತ್ತವನ್ನು ಮೀರತಕ್ಕದ್ದಲ್ಲ.
4) ಈ ಕಾಮಗಾರಿಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ 5054 ರಸ್ತೆ ಮತ್ತು ಸೇತುವೆಗಳು ಅಡಿಯಲ್ಲಿ ಈ ಉದ್ದೇಶಕ್ಕಾಗಿ ಒದಗಿಸಲಾಗಿರುವ ಅನುದಾನದಲ್ಲಿ ಭರಿಸತಕ್ಕದ್ದು.
5) ಕಾರ್ಯನಿರ್ವಾಹಕ ಇಂಜಿನಿಯರ್ ಮತ್ತು ಅಧೀಕ್ಷಕ ಇಂಜಿನಿಯರ್ ಈ ಕಾಮಗಾರಿಗಳನ್ನು ಖುದ್ದಾಗಿ ಪರಿವೀಕ್ಷಿಸಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಪೂರ್ಣಗೊಳಿಸಲು ಎಲ್ಲಾ ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ರೇವಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ(ಸಂಪರ್ಕ)

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ವಿಷಯ:** ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿನ ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರ / ಕೃತಕ ಗರ್ಭಧಾರಣಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಹಾಗೂ ಪಶುಚಿಕಿತ್ಸಾಲಯಗಳನ್ನು ಪಶುಆಸ್ಪತ್ರೆಗಳನ್ನಾಗಿ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** 1. ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಆಪಸಂ/ ಡಿವಿಡಿ–3/ವಿವ–13/2007–08, ದಿನಾಂಕ:19–07–2007.

2. ಸರ್ಕಾರದ ಪತ್ರ ಸಂಖ್ಯೆ:ಪಸಂಮೀ 108 ಪಪಾಯೋ 2007, ದಿನಾಂಕ: 24–09–2007.

3. ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಆಪಸಂ/ ಡಿವಿಡಿ–3/ವಿವ–20/2004–05, ದಿನಾಂಕ:12–10–2007.

4. ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಆಪಸಂ/ ಡಿವಿಡಿ–3/ವಿವ–13/2007–08, ದಿನಾಂಕ:03–12–2007.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮಸಂಖ್ಯೆ(1)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರು 2007–08ನೇ ಸಾಲಿನಲ್ಲಿ ಪ್ರಾದೇಶಿಕ ಅಸಮತೋಲನೆ ನಿವಾರಣೆಗಾಗಿ 8 ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆ ಅಡಿಯಲ್ಲಿ ರೂ.3.5 ಕೋಟಿಗಳನ್ನು ನಿಗದಿಪಡಿಸಲಾಗಿದೆ ಎಂದು ತಿಳಿಸಿ, ರಾಜ್ಯದ ವಿವಿಧ ಜಿಲ್ಲೆಗಳಲ್ಲಿನ 60 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರ / ಕೃತಕ ಗರ್ಭಧಾರಣಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಉನ್ನತೀಕರಿಸಲು ತಲಾ ರೂ.4.28 ಲಕ್ಷಗಳಂತೆ ಒಟ್ಟು ರೂ.256.80 ಲಕ್ಷ ಹಾಗೂ 20 ಪಶುಚಿಕಿತ್ಸಾಲಯಗಳನ್ನು ಪಶುಆಸ್ಪತ್ರೆಗಳನ್ನಾಗಿ ಉನ್ನತೀಕರಿಸಲು ತಲಾ ರೂ.4.40 ಲಕ್ಷಗಳಂತೆ ಒಟ್ಟು ರೂ.88.00 ಲಕ್ಷಗಳ ಅನುದಾನ ಅವಶ್ಯಕತೆ ಇರುತ್ತದೆ. ಈ ರೀತಿ ಉನ್ನತೀಕರಿಸುವ ಪ್ರಕ್ರಿಯೆಗೆ ಒಟ್ಟು ರೂ.344.80 ಲಕ್ಷಗಳ ಅನುದಾನದ ಅವಶ್ಯಕತೆ ಇದ್ದು, ಸದರಿ ಅನುದಾನವನ್ನು ಲೆಕ್ಕಶೀರ್ಷಿಕೆ: 2403–00–101–0–71(ಯೋಜನೆ) ಅಡಿಯಲ್ಲಿ ಮಂಜೂರು ಮಾಡುವಂತೆ ಕೋರಿ ವೆಚ್ಚದ ವಿವರ ಹಾಗೂ ಸಿಬ್ಬಂದಿಗಳ ಸೃಜನೆ ವಿವರಗಳೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ(2)ರ ಸರ್ಕಾರಿ ಪತ್ರದನ್ವಯ 60 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರ / ಕೃತಕ ಗರ್ಭಧಾರಣಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ಹಾಗೂ 20 ಪಶುಚಿಕಿತ್ಸಾಲಯಗಳನ್ನು ಪಶುಆಸ್ಪತ್ರೆಗಳನ್ನಾಗಿ ಉನ್ನತೀಕರಿಸಲು ಸರ್ಕಾರದ ಆದೇಶ / ಅನುಮತಿ ಪಡೆಯಲಾಗಿದೆಯೇ ಎಂಬ ಬಗ್ಗೆ ಮಾಹಿತಿ ಒದಗಿಸುವಂತೆ ಆಯುಕ್ತರನ್ನು ಕೋರಲಾಗಿತ್ತು.

ಅದರಂತೆ ಮೇಲೆ ಓದಲಾದ ಕ್ರಮಸಂಖ್ಯೆ(3) ಹಾಗೂ (4)ರ ಪತ್ರಗಳಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರು 60 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರ / ಕೃತಕ ಗರ್ಭಧಾರಣಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ಹಾಗೂ 20 ಪಶುಚಿಕಿತ್ಸಾಲಯಗಳನ್ನು ಪಶುಆಸ್ಪತ್ರೆಗಳನ್ನಾಗಿ ಉನ್ನತೀಕರಿಸಲು ಸರ್ಕಾರದ ಆದೇಶ/ ಅನುಮತಿ ದೊರೆತಿರುವುದಿಲ್ಲ. ಹೀಗಾಗಿ ಸದರಿ ಉನ್ನತೀಕರಣಕ್ಕೆ ಅಗತ್ಯವಿರುವ ರೂ.344.80 ಲಕ್ಷಗಳ ಅನುದಾನವನ್ನು ಲೆಕ್ಕಶೀರ್ಷಿಕೆ:2403–00–101–0–71(ಯೋಜನೆ) ಅಡಿಯಲ್ಲಿ ಬಿಡುಗಡೆ ಮಾಡುವಂತೆ ಹಾಗೂ ವಿವಿಧ ಜಿಲ್ಲೆಗಳಲ್ಲಿನ ಹೆಚ್ಚು ಹಿಂದುಳಿದ, ತೀರಾ ಹಿಂದುಳಿದ, ಹಿಂದುಳಿದ ಹಾಗೂ ಅಗತ್ಯವಿರುವ ಇತರೆ ತಾಲ್ಲೂಕುಗಳಲ್ಲಿ ಗುರುತಿಸಿರುವ 60 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರ / ಕೃತಕ ಗರ್ಭಧಾರಣಾ ಕೇಂದ್ರಗಳನ್ನು ಹಾಗೂ 20 ಪಶುಚಿಕಿತ್ಸಾಲಯಗಳನ್ನು ಉನ್ನತೀಕರಿಸಲು ಸೂಕ್ತ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 365 ಪಸಸೇ 2007, ಬೆಂಗಳೂರು, ದಿನಾಂಕ:18ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ಈ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಿ, ಡಾ: ಡಿ.ಎಂ.ನಂಜುಂಡಪ್ಪನವರ ಪ್ರಾದೇಶಿಕ ಅಸಮತೋಲನಾ ವರದಿಯಲ್ಲಿರುವ (Regional Imbalance Report) ಹಿಂದುಳಿದ ತಾಲ್ಲೂಕುಗಳಿಗನುಸಾರ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ, ಅನುಬಂಧ–1ರಲ್ಲಿ ನಮೂದಿಸಿರುವ 48 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರ / ಕೃತಕ ಗರ್ಭಧಾರಣಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ಹಾಗೂ ಅನುಬಂಧ–2ರಲ್ಲಿ ನಮೂದಿಸಿರುವ 15 ಪಶುಚಿಕಿತ್ಸಾಲಯಗಳನ್ನು ಪಶುಆಸ್ಪತ್ರೆಗಳನ್ನಾಗಿ ಉನ್ನತೀಕರಿಸಲು ಸರ್ಕಾರದ ಮಂಜೂರಾತಿ ನೀಡಿ ಆದೇಶಿಸಿದೆ.

ಸದರಿ ಉನ್ನತೀಕರಣಕ್ಕೆ ಅಗತ್ಯವಿರುವ 48 ಪಶುವೈದ್ಯಾಧಿಕಾರಿ, 15 ಪಶುವೈದ್ಯಕೀಯ ಮೇಲ್ವಿಚಾರಕರು, 15 ದ್ವಿತೀಯ ದರ್ಜೆ ಸಹಾಯಕರು ಮತ್ತು 48 ಡಿ–ದರ್ಜೆ ಹುದ್ದೆಗಳನ್ನು ಸೃಜಿಸಲು ಸಹ ಸರ್ಕಾರದ ಅನುಮೋದನೆ ನೀಡಿದೆ. ಹೊಸದಾಗಿ ಸೃಷ್ಟಿಸಲಾದ ಈ ಹುದ್ದೆಗಳನ್ನು ನಿಯಮಾನುಸಾರ ಭರ್ತಿ ಮಾಡುವ ಮುನ್ನ ಉನ್ನತೀಕರಣದ ಕಾರ್ಯಗಳು, ಅಗತ್ಯವಿರುವ ಮೂಲಭೂತ ಸೌಕರ್ಯಗಳು, ಉಪಕರಣಗಳು ಎಲ್ಲವೂ ಸಮರ್ಪಕವಾಗಿ ಪೂರೈಕೆಯಾಗಿರುವುದನ್ನು ಖಚಿತಪಡಿಸಿಕೊಳ್ಳುವುದು. ಡಿ–ದರ್ಜೆ ಹುದ್ದೆಗಳನ್ನು ಹೊರ ಗುತ್ತಿಗೆ ಆಧಾರದ ಮೂಲಕ ಮಾತ್ರವೇ ಭರ್ತಿ ಮಾಡಿಕೊಳ್ಳಬೇಕೆಂದು ತಿಳಿಸಿದೆ.

ಉನ್ನತೀಕರಣಕ್ಕೆ ಅವಶ್ಯವಿರುವ ಅನುದಾನದ ಬಿಡುಗಡೆಗೆ 2008–09ನೇ ಆರ್ಥಿಕ ವರ್ಷದಲ್ಲಿ ಹೊಸದಾಗಿ ಪ್ರಸ್ತಾವನೆ ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ಯೋಜನಾ ಇಲಾಖೆ ಟಿಪ್ಪಣಿ ಸಂಖ್ಯೆ: ಪಿಡಿ 05 ಪಿಎಫ್‌ಓ 2008, ದಿನಾಂಕ:24–03–2008ರಲ್ಲಿ ನೀಡಿರುವ ಸಹಮತಿಯನ್ವಯ ಹಾಗೂ ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ:ಆಇ 667 ವೆಚ್ಚ.4/07, ದಿನಾಂಕ: 01–04–2008ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಪಿ.ನಾಗರಾಜ**
ಪೀಠಾಧಿಕಾರಿ–2,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
(ಪಶುಸಂಗೋಪನೆ–ಎ).

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 365 ಪಸಸೇ 2007,**
**ದಿನಾಂಕ:18–08–2008ಕ್ಕೆ ಅನುಬಂಧ–2**
**ಪಶುಚಿಕಿತ್ಸಾಲಯಗಳನ್ನು ಪಶುಆಸ್ಪತ್ರೆಗಳನ್ನಾಗಿ ಉನ್ನತೀಕರಿಸಿರುವ ಸ್ಥಳಗಳ ವಿವರ**

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಗ್ರಾಮದ ಹೆಸರು | |
|---|---|---|---|---|
| (1) | ಚಿತ್ರದುರ್ಗ | ಹೊಸದುರ್ಗ | 1 | ಮತ್ತೋಡು |
| (2) | ಶಿವಮೊಗ್ಗ | ಸೊರಬ | 2 | ಜಡೆ |
| (3) | ಬಿಜಾಪುರ | ಮುದ್ದೇಬಿಹಾಳ | 3 | ತಾಳೀಕೋಟೆ |
| (4) | ಬಳ್ಳಾರಿ | ಕೂಡ್ಲಗಿ | 4 | ಕೊಟ್ಟೂರು |
| (5) | ಬಾಗಲಕೋಟೆ | ಬೀಳಗಿ | 5 | ಕೆರೂರು |
| (6) | ಬೀದರ್ | ಬಸವಕಲ್ಯಾಣ | 6 | ಹಲಸೂರು |
| (7) | ರಾಯಚೂರು | ಮಾನ್ವಿ | 7 | ಕುರಡಿ |
| (8) | ದಾವಣಗೆರೆ | ಚನ್ನಗಿರಿ | 8 | ಬಸವಾಪಟ್ಟಣ |
| (9) | ಮಂಡ್ಯ | ಪಾಂಡವಪುರ | 9 | ಚಿನಕುರಳಿ |
| (10) | ಚಾಮರಾಜನಗರ | ಗುಂಡ್ಲುಪೇಟೆ | 10 | ಕಬ್ಬಳ್ಳಿ |
| | | ಆಳಂದ | 11 | ಮಾದನಹಿಪ್ಪರಗಾ |
| (11) | ಗುಲ್ಬರ್ಗಾ | ಯಾದಗಿರಿ | 12 | ಹತಿಕುಣಿ |
| (12) | ತುಮಕೂರು | ಗುಬ್ಬಿ | 13 | ಕಡಬ |
| (13) | ಬೆಳಗಾವಿ | ಗೋಕಾಕ್ | 14 | ಅವರಾದಿ |
| (14) | ಚಿಕ್ಕಮಗಳೂರು | ಕಡೂರು | 15 | ನಿಡಘಟ್ಟ |

**ಎಂ.ಪಿ.ನಾಗರಾಜ**
ಪೀಠಾಧಿಕಾರಿ–2,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
(ಪಶುಸಂಗೋಪನೆ–ಎ).

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 365 ಪಸಸೇ 2007,**
**ದಿನಾಂಕ:18–08–2008ಕ್ಕೆ ಅನುಬಂಧ–1**
**ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರ / ಕೃತಕ ಗರ್ಭಧಾರಣಾ ಕೇಂದ್ರಗಳನ್ನು ಮೇಲ್ದರ್ಜೆಗೇರಿಸಿರುವ ಸ್ಥಳಗಳ ವಿವರ**

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರ / ಕೃತಕ ಗರ್ಭಧಾರಣಾ ಕೇಂದ್ರಗಳ ಹೆಸರು | |
|---|---|---|---|---|
| (1) | ಚಿತ್ರದುರ್ಗ | ಚಳ್ಳಕೆರೆ | 1 | ತಳಕು |
| (2) | ಕೋಲಾರ | ಚಿಂತಾಮಣಿ | 2 | ಯಲಮಲಪಾಡಿ |
| (3) | ಶಿವಮೊಗ್ಗ | ಸೊರಬ | 3 | ಹುದ್ರಿ |
| (4) | ಮೈಸೂರು | ಹುಣಸೂರು | 4 | ಚಿಲ್ಕುಂದ |
| (5) | ಚಾಮರಾಜನಗರ | ಗುಂಡ್ಲುಪೇಟೆ | 5 | ಬರ್ಗಿ |
| (6) | ಮಂಡ್ಯ | ಮದ್ದೂರು | 6 | ಹಳೇಹಳ್ಳಿ |
| (7) | ಬಿಜಾಪುರ | ಇಂಡಿ | 7 | ನಾದ |
| | | ಸಿಂಧಗಿ | 8 | ದೇವಣಗಾಂವ |
| (8) | ಬಾಗಲಕೋಟೆ | ಬಾದಾಮಿ | 9 | ಅನವಾಲ |
| | | ಬೀಳಗಿ | 10 | ಸುನಗ |
| | | ಹುನಗುಂದ | 11 | ಐಹೊಳೆ |

| | | | | |
|---|---|---|---|---|
| (9) | ಬೀದರ್ | ಹುಮನಾಬಾದ್ | 12 | ಮದರಗಾಂವ್ |
| | | ಭಾಲ್ಕಿ | 13 | ಮೋರಂಬಿ |
| | | ಔರಾದ್ | 14 | ಸುಂಧಾಳ |
| (10) | ಹಾಸನ | ಹೊಳೆನರಸೀಪುರ | 15 | ಬೆಳಕುಣಿ |
| | | | 16 | ಮಾವನೂರು |
| (11) | ಬಳ್ಳಾರಿ | ಸಿರಗುಪ್ಪ | 17 | ಮಣ್ಣೂರು |
| | | ಹೊಸಪೇಟೆ | 18 | ಮರಿಯಮ್ಮನಹಳ್ಳಿ |
| | | ಹಗರಿಬೊಮ್ಮನಹಳ್ಳಿ | 19 | ತಂಬ್ರಹಳ್ಳಿ |
| | | | 20 | ಕೋಗಳಿ |
| (12) | ಚಿಕ್ಕಮಗಳೂರು | ತರೀಕರೆ | 21 | ನೇರಲಕೆರೆ |
| | | ಕಡೂರು | 22 | ದೇವನೂರು |
| (13) | ರಾಯಚೂರು | ರಾಯಚೂರು | 23 | ಯರಗೇರಾ |
| | | ಮಾನ್ವಿ | 24 | ಬಾಗಲವಾಡ |
| | | ಸಿಂಧನೂರು | 25 | ಸಾಸಲಮರಿ ಕ್ಯಾಂಪ್ |
| (14) | ಧಾರವಾಡ | ಕುಂದಗೋಳ | 26 | ಬೆಟ್ಟದೂರು |
| (15) | ಗುಲ್ಬರ್ಗಾ | ಅಫಜಲಪುರ | 27 | ಬಡಂಕಲಗಾ |
| | | ಆಳಂದ | 28 | ಕಜೂರಿ |
| | | ಚಿತ್ತಾಪೂರ | 29 | ದಂಡೋತಿ |
| | | ಚಿಂಚೋಳಿ | 30 | ಚಂದನಕೇರಾ |
| | | ಜೇವರ್ಗಿ | 31 | ಬುಳುಬಟ್ಟಿ |
| | | ಶಹಾಪೂರ | 32 | ಹಾಲಗೇರಾ |
| | | ಸುರುಪೂರ | 33 | ದೇವತಕಲ್ |
| | | ಯಾದಗೀರ್ | 34 | ಅಲ್ಲಿಪೂರ |
| | | | 35 | ಹರಸೂರ |
| | | ಗುಲಬರ್ಗಾ | 36 | ಸಾವಳಗಿ |
| (16) | ಗದಗ | ಶಿರಹಟ್ಟಿ | 37 | ಹೆಬ್ಬಾಳ |
| (17) | ಕೊಪ್ಪಳ | ಕೊಪ್ಪಳ | 38 | ಮುದ್ದಾಭಳ್ಳಿ |
| | | ಗಂಗಾವತಿ | 39 | ಬೆನ್ನೂರು |
| | | ಕುಷ್ಟಗಿ | 40 | ಸಂಗನಾಳ |
| (18) | ತುಮಕೂರು | ಮಧುಗಿರಿ | 41 | ಗೊಂದಿಹಳ್ಳಿ |
| | | ಕುಣಿಗಲ್ | 42 | ಕೆ.ಹೆಚ್.ಹಳ್ಳಿ |
| (19) | ಬೆಳಗಾವಿ | ಹುಕ್ಕೇರಿ | 43 | ಉ. ಖಾನಾಪೂರ |
| | | ರಾಮದುರ್ಗ | 44 | ಸುರೇಬಾನ್ |
| (20) | ದಾವಣಗೆರೆ | | 45 | ಸವಳಂಗ |
| | | ಹೊನ್ನಾಳಿ | 46 | ಅರಕೆರೆ |
| | | ಚನ್ನಗಿರಿ | 47 | ಪಾಂಡೋಮಟ್ಟಿ |
| (21) | ರಾಮನಗರ | ಮಾಗಡಿ | 48 | ಚಿಕ್ಕಮುದಿಗೆರೆ |

**ಎಂ.ಪಿ.ನಾಗರಾಜ**
ಪೀಠಾಧಿಕಾರಿ–2,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
(ಪಶುಸಂಗೋಪನೆ–ಎ).

ಪಿ.ಆರ್. 1262

## COMMERCE & INDUSTRIES SECRETARIAT

**Sub :** Publication of Karnataka Mineral Policy, 2008.

**PREAMBLE:**

Minerals are important natural, finite and non-renewable valuable resources essential for mankind. “Minerals are the treasures of the State”, therefore, systematic, scientific and sustainable harnessing of mineral wealth should be the cornerstone of development objectives of the state. The utilization of these minerals has to be guided by long-term goals and perspectives. As these goals and perspectives are dynamic and responsive to the economic scenario, the Karnataka mineral policy has to

evolve. It is therefore necessary to revise the Karnataka Mineral Policy 2000. Accordingly, in this connection, opinion of different Organizations and NGOs connected with mining have been obtained and further, prominent features in the National Mineral Policy, 2008 have also been incorporated in Karnataka Mineral Policy, 2008. Accordingly, the Government has decided to publish Karnataka Mineral Policy, 2008, in place of Karnataka Mineral Policy, 2000.

**GOVERNMENT ORDER NO.CI.221:MMM.2006, BANGALORE, DATED:10th December, 2008.**

In the circumstances explained in the preamble, the Government is pleased to publish Karnataka Mineral Policy, 2008 with immediate effect and until further orders as appended to this order, replacing Karnataka Mineral Policy, 2000.

By order and in the name of the Governor of Karnataka,

**V.UMESH**

Principal Secretary to Government

Commerce & Industries Department.

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ಕರ್ನಾಟಕ ಖನಿಜ ನೀತಿ, 2008 ಅನ್ನು ಪ್ರಕಟಿಸುವ ಕುರಿತು.

**ಪ್ರಸ್ತಾವನೆ:**

ಖನಿಜಗಳು ಮನುಕುಲಕ್ಕೆ ಅತ್ಯಗತ್ಯವಾದ ಸಹಜವಾದ, ಸೀಮಿತವಾದ ಮತ್ತು ನವೀಕರಿಸಲಾಗದ ಅಮೂಲ್ಯ ಸಂಪನ್ಮೂಲಗಳು. "ಖನಿಜಗಳು ರಾಜ್ಯದ ನಿಧಿ"ಯಾದ್ದರಿಂದ, ರಾಜ್ಯವು ಖನಿಜಗಳನ್ನು ತೆಗೆಯುವ ಬಗ್ಗೆ ಕ್ರಮಬದ್ಧವಾದ, ವೈಜ್ಞಾನಿಕವಾದ ಮತ್ತು ಸದಾಕಾಲ ಲಭ್ಯವಾಗುವ ರೀತಿಯಲ್ಲಿ ಅಭಿವೃದ್ಧಿಯ ಯೋಜನೆ ರೂಪಿಸುವ ಅವಶ್ಯಕತೆಯಿದ್ದು ದೀರ್ಘಕಾಲದ ಗುರಿ ಮತ್ತು ಮುಂದಿನ ಯೋಜನೆಗಳು ಈ ಖನಿಜಗಳ ಬಳಕೆಯಲ್ಲಿ ಮಾರ್ಗದರ್ಶನವಾಗಿರಬೇಕು ಎಂಬ ನಿಟ್ಟಿನಲ್ಲಿ ಹಾಗೂ ಈ ಗುರಿಗಳು ಮತ್ತು ಯೋಜನೆಗಳು ಆರ್ಥಿಕ ಪರಿಸ್ಥಿತಿಗನುಗುಣವಾಗಿ ಬದಲಾಗುವುದರಿಂದ, ಅದಕ್ಕನುಗುಣವಾಗಿ ಕರ್ನಾಟಕ ಖನಿಜ ನೀತಿಯು ರೂಪುಗೊಳ್ಳಬೇಕಾದ ಅವಶ್ಯಕತೆ ಇರುವುದನ್ನು ಸರ್ಕಾರವು ಮನಗಂಡು, ಗಣಿಗಾರಿಕೆಗೆ ಸಂಬಂಧಿಸಿದ ವಿವಿಧ ಸಂಸ್ಥೆಗಳ ಮತ್ತು ಎನ್.ಜಿ.ಓ.ಗಳ ಸಲಹೆ ಮತ್ತು ಅಭಿಪಾಯಗಳನ್ನು ಕ್ರೋಢೀಕರಿಸಿ ಹಾಗೂ ಭಾರತ ಸರ್ಕಾರ ಗಣಿ ಮಂತ್ರಾಲಯವು ಇತ್ತೀಚೆಗೆ ಪಕಟಿಸಿರುವ ರಾಷ್ಟ್ರೀಯ ಖನಿಜ ನೀತಿ 2008ರಿಂದ ಕೆಲವೊಂದು ಪಮುಖ ಅಂಶಗಳನ್ನು ಅಳವಡಿಸಿಕೊಂಡು, ಪಸ್ತುತ ಚಾಲ್ತಿಯಲ್ಲಿರುವ ಕರ್ನಾಟಕ ಖನಿಜ ನೀತಿ, 2000 ರ ಬದಲಿಗೆ, ಕರ್ನಾಟಕ ಖನಿಜ ನೀತಿ, 2008ಅನ್ನು ಪ್ರಕಟಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ, ಈ ಕೆಳಕಂಡ ಆದೇಶ:

**ಸರ್ಕಾರದ ಅದೇಶ ಸಂಖ್ಯೆ:ಸಿಐ.221:ಎಂಎಂಎಂ.2006, ಬೆಂಗಳೂರು, ದಿನಾಂಕ:10ನೇ ಡಿಸೆಂಬರ್ 2008**

ಪಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ, ಪಸ್ತುತ ಚಾಲ್ತಿಯಲ್ಲಿರುವ ಕರ್ನಾಟಕ ಖನಿಜ ನೀತಿ, 2000 ರ ಬದಲಿಗೆ ಈ ಆದೇಶದೊಂದಿಗೆ ಲಗತ್ತಿಸಿರುವ ಕರ್ನಾಟಕ ಖನಿಜ ನೀತಿ, 2008ಅನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರವು ಪ್ರಕಟಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ, ಮತ್ತು ಅವರ ಹೆಸರಿನಲ್ಲಿ

**ವಿ. ಉಮೇಶ್**

ಸರ್ಕಾರದ ಪಧಾನ ಕಾರ್ಯದರ್ಶಿ

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಕರ್ನಾಟಕ ಖನಿಜ ನೀತಿ, 2008:

**1. ಪೀಠಿಕೆ:–**

ಖನಿಜಗಳು ಮನುಕುಲಕ್ಕೆ ಅತ್ಯಗತ್ಯವಾದ ಸಹಜವಾದ, ಸೀಮಿತವಾದ ಮತ್ತು ನವೀಕರಿಸಲಾಗದ ಅಮೂಲ್ಯ ಸಂಪನ್ಮೂಲಗಳು. "ಖನಿಜಗಳು ರಾಜ್ಯದ ನಿಧಿ" ಯಾದ್ದರಿಂದ, ರಾಜ್ಯವು ಖನಿಜಗಳನ್ನು ತೆಗೆಯುವ ಬಗ್ಗೆ ಕಮಬದ್ಧವಾದ, ವೈಜ್ಞಾನಿಕ ವಾದ ಮತ್ತು ಸದಾಕಾಲ ಲಭ್ಯವಾಗುವ ರೀತಿಯಲ್ಲಿ ಅಭಿವೃದ್ಧಿಯ ಯೋಜನೆ ರೂಪಿಸಬೇಕು. ದೀರ್ಘಕಾಲದ ಗುರಿ ಮತ್ತು ಮುಂದಿನ ಯೋಜನೆಗಳು ಈ ಖನಿಜಗಳ ಬಳಕೆಯಲ್ಲಿ ಮಾರ್ಗದರ್ಶನವಾಗಿರಬೇಕು. ಈ ಗುರಿಗಳು ಮತ್ತು ಯೋಜನೆಗಳು ಆರ್ಥಿಕ ಪರಿಸ್ಥಿತಿಗನುಗುಣವಾಗಿ ಬದಲಾಗುವುದರಿಂದ, ಅದಕ್ಕನುಗುಣವಾಗಿ ಕರ್ನಾಟಕ ಖನಿಜ ನೀತಿಯೂ ರೂಪುಗೊಳ್ಳಬೇಕು. ಆದ್ದರಿಂದ, ಕರ್ನಾಟಕ ಖನಿಜ ನೀತಿ, 2000 ಅನ್ನು ಮತ್ತೆ ಪರಿಶೀಲಿಸುವುದು ಅವಶ್ಯಕವಿದೆ.

1.1: ಭಾರತದಲ್ಲಿ, ಕರ್ನಾಟಕ ಖನಿಜಗಳಿಂದ ಸಮೃದ್ಧವಾದ ರಾಜ್ಯ. ಕರ್ನಾಟಕ 29 ಜಿಲ್ಲೆಗಳನ್ನೊಳಗೊಂಡಿದ್ದು, 1.92 ಲಕ್ಷ ಚ.ಕಿ.ಮೀ.ಗಳಿಗೆ ಆವರಿಸಿದೆ. ರಾಜ್ಯವು ಪ್ರಿಕೇಂಬ್ರಿಯನ್‌ನಿಂದ ಇತ್ತೀಚಿನವರೆಗೆ ರಚನೆಯಾಗಿರುವ ವ್ಯಾಪಕ ಹಾಗೂ ವಿಭಿನ್ನ ಭೂಗರ್ಭ ಪದರಗಳು ಮತ್ತು 40,000 ಚದರ ಕಿ.ಮೀ. ಗಳಷ್ಟು ಹಸಿರು ಶಿಲಾಪಟ್ಟಿಯಿಂದ ಕೂಡಿದೆ. ಇದು ಚಿನ್ನ, ಬೆಳ್ಳಿ, ತಾಮ್ರ, ಕಬ್ಬಿಣದ ಅದಿರು, ಮ್ಯಾಂಗನೀಸ್, ಸುಣ್ಣದಕಲ್ಲು, ಡೊಲೋಮೈಟ್, ಕ್ರೋಮೈಟ್, ಮ್ಯಾಗ್ನಸೈಟ್ ಮತ್ತು ಇತರೆ ಉಪಯುಕ್ತ ಶಿಲಾರಚನೆಗಳಾದ ಗ್ರಾನೈಟ್ ಖನಿಜ ಸಂಪತ್ತಿನಿಂದ ತುಂಬಿದೆ.

1.2: ರಾಜ್ಯದಲ್ಲಿ ಅತ್ಯಾಧುನಿಕ ತಂತಜ್ಞಾನವನ್ನು ಬಳಸಿ, ಚಿನ್ನ, ಪ್ಲಾಟಿನಂ ಮತ್ತು ಪಶಸ್ತ ಮತ್ತು ಅರೆ ಪಶಸ್ತ ಖನಿಜಗಳ ಪರಿಶೋಧನೆಗೆ ಅತ್ಯಧಿಕ ಅವಕಾಶವಿದೆ. ಹಾಗೆಯೇ, ರಾಜ್ಯದಲ್ಲಿ ರಿಫ್ರಾಕ್ಟರಿ ಮತ್ತು ಸಿರಾಮಿಕ್ ಖನಿಜಗಳ ಪರಿಶೋಧನೆಗೂ ಅತೀ ಹೆಚ್ಚಿನ ಅವಕಾಶವಿದೆ.

1.3: ಕರ್ನಾಟಕವು ಪಗತಿಪರ ಕೈಗಾರಿಕಾ ಅಭಿವೃದ್ಧಿ ಕಾರ್ಯಕಮವನ್ನು ಅಳವಡಿಸಿ ಕೊಂಡ ಹೆಮ್ಮೆಗೆ ಪಾತವಾಗಿದೆ ಮತ್ತು ಉಕ್ಕು ಮತ್ತು ಸಿಮೆಂಟ್ ವಲಯಗಳ ರಚನೆಯನ್ನು ಘೋಷಿಸಿದೆ. ಈ ಅವಶ್ಯಕತೆಯನ್ನು ಪೂರೈಸಲು ಖನಿಜಾಧಾರಿತ ಕಚ್ಚಾ ಪದಾರ್ಥಗಳು ಅತ್ಯಂತ ಅಗತ್ಯವಾಗಿವೆ.

**2. <u>ಸದ್ಯದ ಗಣಿ ಚಟುವಟಿಕೆ:–</u>**

2.1: ಕೋಲಾರ ಚಿನ್ನದ ಗಣಿ ವ್ಯವಸ್ಥಿತವಾಗಿ ಕಾರ್ಯಾಚರಣೆ ನಡೆಸುತ್ತಿದ್ದ ಅತ್ಯಂತ ಹಳೆಯ ಚಿನ್ನದ ಗಣಿ, ಈಗ ಆರ್ಥಿಕ ಹಾಗೂ ತಾಂತಿಕ ಕಾರಣಗಳಿಗಾಗಿ ಮುಚ್ಚಲಾಗಿದೆ. ರಾಯಚೂರು ಜಿಲ್ಲೆಯ ಹಟ್ಟಿ ಚಿನ್ನದ ಗಣಿ ಒಂದೇ ಈಗ ರಾಜ್ಯದಲ್ಲಿ ಚಿನ್ನ ಉತ್ಪಾದಿಸುತ್ತಿರುವ ಗಣಿ. ಇದರ ಸರಾಸರಿ ವಾರ್ಷಿಕ ಉತ್ಪಾದನೆ ಸುಮಾರು 2.8 ಟನ್ನುಗಳು.

2.2: ರಾಜ್ಯದಲ್ಲಿ 9000 ಮಿಲಿಯನ್ ಟನ್‌ಗಳಿಗೂ ಅಧಿಕ ಕಬ್ಬಿಣದ ಅದಿರಿನ ಸಂಪನ್ಮೂಲವಿದ್ದು, ಅದರಲ್ಲಿ ಹೆಚ್ಚಿನ ಭಾಗವು ಮ್ಯಾಗ್ನಟೈಟ್. 2007-08 ರ ಅವಧಿಯಲ್ಲಿ ರಾಜ್ಯದ ಕಬ್ಬಿಣದ ಅದಿರಿನ ಉತ್ಪಾದನೆ 47 ದಶಲಕ್ಷ ಟನ್ನುಗಳನ್ನುಗಳನ್ನು ದಾಟಿದೆ. ಈ ಉತ್ಪಾದನೆಯ ಬಹುಭಾಗವು ಬಳ್ಳಾರಿ, ಹೊಸಪೇಟೆ ಪದೇಶಗಳಲ್ಲಿ ಕೇಂದ್ರೀಕೃತವಾಗಿದ್ದು, ಉಳಿದ ಭಾಗವು ಚಿತದುರ್ಗ, ತುಮಕೂರು ಮತ್ತು ಬಾಗಲಕೋಟೆ ಜಿಲ್ಲೆಗಳಿಂದ ಲಭ್ಯವಾಗಿದೆ. ಕೆಲವೇ ಉಕ್ಕು, ಸ್ಪಾಂಜ್ ಮತ್ತ ಪಿಗ್ ಐರನ್ ಸ್ಥಾವರಗಳು ಸಿಂಟರಿಂಗ್ ಮತ್ತು ಪೆಲೆಟ್ ಘಟಕಗಳನ್ನು ಹೊಂದಿರುವುದರಿಂದ, ಬಹಳಷ್ಟು ಕಬ್ಬಿಣದ ಅದಿರಿನ ಪುಡಿಯನ್ನು ರಫ್ತು ಮಾಡಲಾಗುತ್ತಿದೆ.

2.3: ರಾಜ್ಯದ ಮತ್ತೊಂದು ಪಮುಖ ಖನಿಜ ಸಂಪನ್ಮೂಲ ಎಂದರೆ ಸುಣ್ಣದಕಲ್ಲು. ಅಂದಾಜು ಮಾಡಲಾದ ಇದರ ಸಂಪನ್ಮೂಲ 51,000 ದಶಲಕ್ಷ ಟನ್ನುಗಳು. ಇದು ಗುಲ್ಬರ್ಗಾ, ಬಾಗಲಕೋಟೆ, ಬೆಳಗಾಂ, ಚಿತದುರ್ಗ, ತುಮಕೂರು, ಶಿವಮೊಗ್ಗ ಮತ್ತು ಉತ್ತರಕನ್ನಡ ಜಿಲ್ಲೆಗಳಲ್ಲಿ ಹರಡಿದೆ. ಈಗ ಉತ್ಪಾದನೆಯಾಗುತ್ತಿರುವ ಸುಮಾರು 14 ದಶಲಕ್ಷ ಟನ್ನುಗಳು, ಈ ಜಿಲ್ಲೆಗಳಲ್ಲಿ ಈಗಿರುವ 10 ಸಿಮೆಂಟ್ ಸ್ಥಾವರಗಳಿಗೆ ಪೂರೈಕೆಯಾಗುತ್ತಿದೆ. ಪರಿಸರ ನಾಶವಾಗದ ರೀತಿಯಲ್ಲಿ ಖನಿಜಗಳನ್ನು ಗರಿಷ್ಠ ಮಟ್ಟದಲ್ಲಿ ಬಳಸಿ ಕೊಂಡು, ಇನ್ನೂ ಕೆಲವು ಪರಿಸರ ಸ್ನೇಹಿ ಸಿಮೆಂಟ್ ಸ್ಥಾವರಗಳನ್ನು ಸ್ಥಾಪಿಸಲು ಅವಕಾಶವಿದೆ.

2.4: ರಾಜ್ಯವು ಇತರ ಖನಿಜಗಳಾದ ಕೋಮೈಟ್, ಕಯನೈಟ್, ಡೋಲೋಮೈಟ್, ಮ್ಯಾಗ್ನಸೈಟ್, ಬಾಕ್ಸೈಟ್, ಫೆಲ್ಸೈಟ್, ಡ್ಯೂನೈಟ್ ಮತ್ತು ಕ್ವಾರ್ಟ್ಜ್‌ಗಳನ್ನೂ ಸಹ ಉತ್ಪಾದಿಸುತ್ತದೆ. **ಅನುಬಂಧ–I**ರಲ್ಲಿ ಖನಿಜಾವಾರು ಗುತ್ತಿಗೆ ಹಾಗೂ ಉತ್ಪಾದನೆಯ ವಿವರಗಳನ್ನು ನೀಡಲಾಗಿದೆ.

2.5: ಕರ್ನಾಟಕ ರಾಜ್ಯವು ವಿರಳವಾದ ಗ್ರಾನೈಟ್ ಸಂಪತ್ತನ್ನು ಹೊಂದಿದೆ. ಈ ಗ್ರಾನೈಟ್ ಸಂಪತ್ತಿನಿಂದ ಕರ್ನಾಟಕ ರಾಜ್ಯವನ್ನು ಅಂತಾರಾಷ್ಟ್ರೀಯ ಮಟ್ಟದಲ್ಲಿ ಗುರುತಿಸುವಂತಾಯಿತು. ಪಸ್ತುತ ಖನಿಜ ನೀತಿಯಲ್ಲಿನ ಬದಲಾವಣೆಗಳ ಮೂಲಕ ಹಿಂದಿನ ವೈಭವವನ್ನು ಮರಳಿ ಪಡೆಯುವುದು ಅವಶ್ಯಕವಿದೆ. 2006-07ನೇ ಅವಧಿಯಲ್ಲಿ ಗ್ರಾನೈಟ್ ಉತ್ಪಾದನೆಯು 1.96 ಲಕ್ಷ ಘ.ಮೀ. ಇದ್ದು, ವಿವಿಧ ರೀತಿಯ ಗ್ರಾನೈಟ್, ಅವುಗಳ ನಿಕ್ಷೇಪ ಮತ್ತು ಗಣಿಗುತ್ತಿಗೆಗಳ ವಿವರಗಳನ್ನು **ಅನುಬಂಧ–II** ರಲ್ಲಿ ನೀಡಿದೆ.

**3. <u>ಖನಿಜಗಳ ನಿಯಂತಣ:–</u>**

3.1: ಖನಿಜಗಳ ನಿರ್ವಹಣೆಯು ಕೇಂದದ ಹಾಗೂ ರಾಜ್ಯದ ಜವಾಬ್ದಾರಿಯಾಗಿದ್ದು, ಭಾರತ ಸಂವಿಧಾನದ ಏಳನೇ ಅನುಸೂಚಿಯ ಅಡಿಯಲ್ಲಿ, ಕೇಂದ್ರ ಪಟ್ಟಿಯ 54ನೇ ನಮೂದಿನಲ್ಲಿ ಮತ್ತು ರಾಜ್ಯಪಟ್ಟಿಯ 23ನೇ ನಮೂದಿನಲ್ಲಿ ಸೇರಿದೆ.

3.2: ಗಣಿಗಳು ಮತ್ತು ಖನಿಜಗಳ (ಅಭಿವೃದ್ಧಿ ಮತ್ತು ನಿಯಂತಣ) ಅಧಿನಿಯಮ, 1957(ಎಂ.ಎಂ.ಡಿ&ಆರ್ ಅಧಿನಿಯಮ), ಖನಿಜ ರಿಯಾಯಿತಿ ನಿಯಮಗಳು, 1960 (ಎಂ.ಸಿ.ಆರ್.) ಮತ್ತು ಖನಿಜಗಳ ಸಂರಕ್ಷಣೆ ಮತ್ತು ಅಭಿವೃದ್ಧಿ ನಿಯಮಗಳು, 1988 (ಎಂ.ಸಿ.ಡಿ.ಆರ್.) ಇವು ಖನಿಜಗಳ ಸಂರಕ್ಷಣೆ ಮತ್ತು ವ್ಯವಸ್ಥಿತ ಅಭಿವೃದ್ಧಿಗಾಗಿ ಭಾರತ ಸರ್ಕಾರ ಹೊರಡಿಸಿದ ಅಧಿನಿಯಮಗಳು. ಈ ನಿಯಮಗಳು, ಇಂಧನ ಖನಿಜಗಳು, ಪರಮಾಣು ಖನಿಜಗಳು ಮತ್ತು ಉಪ ಖನಿಜಗಳನ್ನು ಹೊರತುಪಡಿಸಿ ಎಲ್ಲಾ ಖನಿಜಗಳಿಗೆ ಅನ್ವಯಿಸುತ್ತವೆ. ಎಂ.ಎಂ.(ಡಿ&ಆರ್) ಅಧಿನಿಯಮದ 1ನೇ ಅನುಸೂಚಿಯ 'ಸಿ' ಭಾಗದಲ್ಲಿ ನಿರ್ದಿಷ್ಟಪಡಿಸಿದ ಖನಿಜಗಳ ಸಂಬಂಧದಲ್ಲಿ (**ಅನುಬಂಧ–III**) ಖನಿಜಗಳ ರಿಯಾಯಿತಿ ನೀಡಿಕೆಗೆ ಭಾರತ ಸರ್ಕಾರದ ಪೂರ್ವಾನುಮೋದನೆ ಅಗತ್ಯವಾಗಿದೆ.

3.3: ಉಪಖನಿಜಗಳ ಸಂಬಂಧದಲ್ಲಿ ನಿಯಮ ರಚನಾಧಿಕಾರವನ್ನು ಎಂ.ಎಂ. (ಡಿ&ಆರ್) ಅಧಿನಿಯಮದ 15ನೇ ಅನುಚ್ಛೇದದಡಿಯಲ್ಲಿ ರಾಜ್ಯಗಳಿಗೆ ಪತ್ಯಾಯೋಜಿಸಲಾಗಿದೆ. ಈ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮಾವಳಿ(ಕೆ.ಎಂ.ಎಂ.ಸಿ.ಆರ್.), 1994ಅನ್ನು ರಚಿಸಲಾಗಿದೆ. 1957ರ ಎಂ.ಎಂ.(ಡಿ&ಆರ್) ಅಧಿನಿಯಮದ 23(ಸಿ) ಅನುಚ್ಛೇದ, ಅಕಮ ಗಣಿಗಾರಿಕೆ, ಸಾಗಣೆ ಮತ್ತು ಖನಿಜಗಳ ಸಂಗಹಣೆಯನ್ನು ತಡೆಯುವುದಕ್ಕಾಗಿ ನಿಯಮಗಳನ್ನು ರಚಿಸಲು ರಾಜ್ಯಗಳಿಗೆ ಅಧಿಕಾರ ನೀಡುತ್ತದೆ. ರಾಜ್ಯ ಸರ್ಕಾರ ಈ ನಿಯಮಗಳನ್ನೂ ಸಹ ರಚಿಸಿದೆ.

3.4: ಪೂರ್ವಾನ್ವೇಷಣಾ ಪರವಾನಗಿ, ಅನ್ವೇಷಣಾ ಪರವಾನಗಿ ಅಥವಾ ಗಣಿಗುತ್ತಿಗೆ ಮಂಜೂರಾತಿ, ಎಂ.ಎಂ.(ಡಿ&ಆರ್)ಕಾಯ್ದೆ, 1957 ಮತ್ತು ಎಂ.ಸಿ.ಆರ್., 1960 ಇವುಗಳಿಗೆ ಒಳಪಟ್ಟಿದೆ. ನಿರ್ದಿಷ್ಟ ಪಧಾನ ಖನಿಜಗಳಿಗೆ ರಾಜ್ಯ ಸರ್ಕಾರವು ಭಾರತ ಸರ್ಕಾರದ ಪೂರ್ವಾನುಮತಿ ಪಡೆದು ಪೂರ್ವಾನ್ವೇಷಣಾ ಪರವಾನಗಿ,

ಅನ್ವೇಷಣಾ ಪರವಾನಗಿ ಅಥವಾ ಗಣಿಗುತ್ತಿಗೆ ನೀಡುತ್ತದೆ. ಮೊದಲು ಬಂದವರಿಗೆ ಮೊದಲ ಆದ್ಯತೆಯ ಆಧಾರದ ಮೇಲೆ ಅನ್ವೇಷಣೆಗೆ ಹಾಗೂ ಖನಿಜಗಳನ್ನು ತೆಗೆಯಲು ಪರವಾನಗಿ ನೀಡಲಾಗುವುದು. 10,000 ಚದರ ಕಿ.ಮೀ.ಗಳ ವಿಸ್ತಾರದ ಮೇಲೆ ವೈಮಾನಿಕ ಸಮೀಕ್ಷೆ ನಡೆಸಲು, ಭಾರತೀಯ ರಾಷ್ಟ್ರೀಯನಾಗಿರುವ ಯಾರೇ ವ್ಯಕ್ತಿಗೆ ಅಥವಾ 1956ರ ಕಂಪೆನಿಗಳ ಅಧಿನಿಯಮದ ೩ನೇ ಪಕರಣದ (1)ನೇ ಉಪ ಪಕರಣದಲ್ಲಿ ಪರಿಭಾಷಿಸಿದ ಕಂಪೆನಿಗೆ ಪೂರ್ವಭಾವಿ ಅನ್ವೇಷಣೆ ಅನುಮತಿ ಯನ್ನು ನೀಡಬಹುದು. ಆದರೆ, ಒಂದು ಲೈಸೆನ್ಸು 5000 ಚ.ಕಿ.ಮೀ. ಗಳನ್ನು ಮೀರತಕ್ಕದ್ದಲ್ಲ. ಅಧಿನಿಯಮ ಮತ್ತು ನಿಯಮಗಳು 25 ಚದರ ಕಿ.ಮೀ.ಗಳನ್ನು ಮೀರದ ಒಟ್ಟು ವಿಸ್ತಾರವನ್ನು ಒಳಗೊಳ್ಳಲು ಅನ್ವೇಷಣಾ ಲೈಸೆನ್ಸುಗಳನ್ನು ನೀಡಲು ಅವಕಾಶ ಕಲ್ಪಿಸುತ್ತದೆ. ಅಧಿನಿಯಮ ಮತ್ತು ನಿಯಮಗಳ ಪ್ರಕಾರ, ಗರಿಷ್ಠ 10 ಚ.ಕಿ.ಮೀ. ಪ್ರದೇಶಕ್ಕೆ ಗಣಿಗುತ್ತಿಗೆ ಯನ್ನು ಮಂಜೂರು ಮಾಡಬಹುದಾಗಿದೆ.

3.5: ಖನಿಜಗಳ ರಿಯಾಯಿತಿ ಹೊಂದಿರುವವರು, ಅನ್ವಯವಾಗುವ ಇತರೆ ಕಾಯ್ದೆಗಳಾದ ಅರಣ್ಯ (ಸಂರಕ್ಷಣಾ) ಕಾಯ್ದೆ, 1980, ಪರಿಸರ (ಸಂರಕ್ಷಣಾ) ಕಾಯ್ದೆ, 1986 ಹಾಗೂ ಜಲ (ಮಾಲಿನ್ಯ ನಿಯಂತಣ ಮತ್ತು ತಡೆಗಟ್ಟುವುದು) ಕಾಯ್ದೆ, 1974 ಮತ್ತು ವಾಯು (ಮಾಲಿನ್ಯ ನಿಯಂತ್ರಣ ಮತ್ತು ತಡೆಗಟ್ಟುವುದು) ಕಾಯ್ದೆ, 1981 ಗಳನ್ನು ಪಾಲಿಸಬೇಕು.

**4 ರಾಷ್ಟ್ರೀಯ ಖನಿಜ ನೀತಿ, 2008:–**

4.1: ಭಾರತ ಸರ್ಕಾರವು ರಾಷ್ಟ್ರೀಯ ಖನಿಜ ನೀತಿ, 1993ರ ಅಡಿಯಲ್ಲಿ ಪರಮಾಣು ಖನಿಜಗಳು ಹಾಗೂ ಇಂಧನ ಖನಿಜಗಳನ್ನು ಹೊರತುಪಡಿಸಿ ಬಹುಪಾಲು ಖನಿಜಗಳಿಗೆ ಲೈಸೆನ್ಸ್ ಹಾಗೂ ಗುತ್ತಿಗೆ ನೀಡುವುದನ್ನು ಉದಾರೀಕರಿಸಿದೆ.

4.2: ರಾಷ್ಟ್ರೀಯ ಖನಿಜ ನೀತಿ, 2008ರ ಮುಖ್ಯ ಅಂಶಗಳು:–

- ಸೂಕ್ತ ಪರಿಶೋಧನೆ ಹಾಗೂ ಅನ್ವೇಷಣೆಯ ತರುವಾಯ ವೈಜ್ಞಾನಿಕ ವಿಧಾನ ಗಳನ್ನಾಧರಿಸಿ ದೇಶದ ಭೂಗರ್ಭ ಸಂಪತ್ತಿನ ಪಯೋಜನ ಪಡೆಯುವುದು.
- ಅದಿರಿನಿಂದ ಖನಿಜ ಹಾಗೂ ಲೋಹಗಳನ್ನು ತೆಗೆಯಲು ಅತ್ಯಾಧುನಿಕ ತಂತ್ರಜ್ಞಾನ ಬಳಸಿ, ಗಣಿಗಾರಿಕೆಯಿಂದುಂಟಾಗುವ ತ್ಯಾಜ್ಯ ಎಳ್ಳಷ್ಟೂ ಇರದಂತೆ ಮಾಡುವುದಕ್ಕೆ ಒತ್ತು ನೀಡುವುದು.
- ಸಂಪನ್ಮೂಲಗಳು ಹಾಗೂ ಮೀಸಲು ಭೂಸಂಪತ್ತಿನ ವಿವರಪಟ್ಟಿಯನ್ನು ತಯಾರಿಸುವುದು, ಗಣಿಗಾರಿಕಾ ಪ್ರದೇಶದ ಪಟ್ಟಿ, ಖನಿಜ ಭೂಪಟವನ್ನು ಸಿದ್ಧಪಡಿಸುವುದಕ್ಕೆ ಆದ್ಯತೆ ನೀಡುವುದು.
- ಮಾನವ ಶಕ್ತಿ, ಸಲಕರಣೆ ಹಾಗೂ ಪರಿಣಿತರನ್ನು ಒದಗಿಸಿ ರಾಜ್ಯಗಳ ಗಣಿ ಹಾಗೂ ಭೂವಿಜ್ಞಾನ ನಿರ್ದೇಶನಾಲಯಗಳನ್ನು ಬಲಗೊಳಿಸುವುದು.
- ಗಣಿಗಾರಿಕೆಯು ಅರಣ್ಯ ಹಾಗೂ ಪರಿಸರದೊಂದಿಗೆ ನಿಕಟ ಸಂಬಂಧ ಹೊಂದಿದೆ. ಆದ್ದರಿಂದ, ಜೀವಿ ಪರಿಸರ ಸಮತೋಲನವನ್ನು ಪುನ: ಸ್ಥಾಪಿಸಲು ಸೂಕ್ತ ಕ್ರಮ ಕೈಗೊಂಡು ಗಣಿಗಾರಿಕೆ ನಡೆಸುವ ಬಗ್ಗೆ ಖಚಿತಪಡಿಸಿಕೊಳ್ಳಲು ಸೂಕ್ತ ಕಾರ್ಯ ಚೌಕಟ್ಟನ್ನು ರಚಿಸುವುದು.
- ಆಧುನಿಕ ಗಣಿಗಾರಿಕಾ ಸಲಕರಣೆ, ಯಂತೋಪಕರಣಗಳು, ಕುಶಲ ಹಾಗೂ ಕುಶಲವಲ್ಲದ ಮಾನವ ಶಕ್ತಿಯನ್ನು ಬಳಸುವ ಮೂಲಕ ವೈಜ್ಞಾನಿಕ ಗಣಿಗಾರಿಕಾ ವಿಧಾನಗಳನ್ನು ಉತ್ತೇಜಿಸುವುದು.
- ಮೌಲ್ಯವರ್ಧನೆಗೆ ಹೆಚ್ಚಿನ ಉತ್ತೇಜನ ನೀಡಲಾಗುತ್ತದೆ. ಸ್ವತಂತ್ರ ಉದ್ಯಮವಾದ ಖನಿಜ ವಲಯದ ಬೆಳವಣಿಗೆಗೆ ಮೌಲ್ಯವರ್ಧನೆ ಪೂರಕವಾಗುವಂತೆ ಮಾಡುವುದು.
- ಖನಿಜಗಳನ್ನು ಮುಂದಿನ ತಲೆಮಾರುಗಳಿಗಾಗಿ ರಕ್ಷಿಸುವುದು.
- ಸರ್ಕಾರಿ ಹಾಗೂ ಖಾಸಗಿ ಸಹಭಾಗಿತ್ವದ ಮೂಲಕ ಸೂಕ್ತ ಮೂಲಭೂತ ಸೌಕರ್ಯಗಳನ್ನು ಸೃಜಿಸುವುದು.
- ನೈಸರ್ಗಿಕ ಸಂಪನ್ಮೂಲಗಳು ವ್ಯರ್ಥವಾಗಿ ಹೋಗದಂತೆ ಸಣ್ಣ ಖನಿಜ ನಿಕ್ಷೇಪ ಗಳನ್ನು ಸರಿಯಾಗಿ ಒಗ್ಗೂಡಿಸಿ ನೋಡಿಕೊಳ್ಳುವುದು.
- ಗಣಿಗಾರಿಕೆ ಹೆಚ್ಚಿನ ಆರ್ಥಿಕ ತೊಂದರೆಗೆ ಸಿಲುಕುವ ಉದ್ಯಮ. ಆದ್ದರಿಂದ, ಸೂಕ್ತ ಹಣಕಾಸಿನ ಬೆಂಬಲದ ವ್ಯವಸ್ಥೆ ಮಾಡುವುದು.
- ವಿದೇಶೀ ವಿನಿಮಯ ಗಳಿಕೆಗಾಗಿ ಖನಿಜಗಳ ರಫ್ತನ್ನು ಮುಂದುವರಿಸುವುದು.
- ಗಣಿಗಳನ್ನು ಮುಚ್ಚಲು ವ್ಯವಸ್ಥಿತವಾಗಿ ಯೋಜಿಸಿ ಭೂಮಿಯನ್ನು ಮೂಲರೂಪಕ್ಕೆ ತರುವುದು.
- ಖನಿಜಗಳಿಂದ ಬರುವ ಆದಾಯದಲ್ಲಿ ಸಂಬಂಧಪಟ್ಟ ರಾಜ್ಯಗಳಿಗೆ, ತೆಗೆದ ಖನಿಜಗಳ ಮೌಲ್ಯದಲ್ಲಿ ನ್ಯಾಯಯುತವಾದ ಪಾಲು ಸಿಗುವಂತೆ ಖನಿಜ ಆದಾಯವನ್ನು ತರ್ಕಬದ್ಧವಾಗಿ ನಿಗದಿಪಡಿಸುವುದು.
- ಇಂಡಿಯನ್ ಬ್ಯೂರೋ ಆಫ್ ಮೈನ್ಸ್‌ನೊಂದಿಗೆ ಕಾರ್ಯಾಚರಣೆ ಹಾಗೂ ಹಣಕಾಸು ಸಂಬಂಧವಾಗಿ ಸಂಪರ್ಕ ಬೆಳೆಸಿಕೊಂಡು ಕಾನೂನುಬಾಹಿರ ಗಣಿಗಾರಿಕೆ ಸಮಸ್ಯೆಯನ್ನು ಬಗೆಹರಿಸಲು ರಾಜ್ಯಗಳಿಗೆ ನೆರವು ನೀಡುವುದು.
- ಖನಿಜಗಳ ಸಂಶೋಧನೆ ಹಾಗೂ ಅಭಿವೃದ್ಧಿಗೆ ಮೊದಲ ಆದ್ಯತೆ ನೀಡಿ ಸಂಶೋಧನೆ, ಅಭಿವೃದ್ಧಿ ಹಾಗೂ ತರಬೇತಿಗಾಗಿ ಸಮಗ ಸಾಂಸ್ಥಿಕ ರೂಪದ ಚೌಕಟ್ಟನ್ನು ರೂಪಿಸುವುದು.

4.3: ಎಲ್ಲದಕ್ಕೂ ಅನ್ವಯವಾಗುವ ಅನಿರ್ಬಂಧಿತ ಪೂರ್ವಭಾವಿ ಪರಿಶೀಲನೆಗೆ, ವಿಸ್ತೃತ ಪದೇಶ ಅನ್ವೇಷಣಾ ಲೈಸೆನ್ಸ್ ನೀಡಿಕೆಗೆ, ಅನಿರ್ಬಂಧಿತ ವರ್ಗಾವಣೆಗೆ ಹಾಗೂ ಉದ್ಯಮಿಗಳಿಗೆ ಅನುಭೋಗಾವಧಿಗೆ ಭದತೆ ನೀಡುವ ಮುಕ್ತ ನೀತಿಯನ್ನು ರಾಷ್ಟ್ರೀಯ ಖನಿಜ ನೀತಿ, 2008ರ ಮೂಲಕ ಪಾರಂಭಿಸಿ, ಮುಂಚಿನ ಕಾರ್ಯನೀತಿಯನ್ನು ಬದಲಿಸಲಾಗಿದೆ. ಭಾರತ ಸರ್ಕಾರವು ಇತರ ರಾಜ್ಯಗಳೊಂದಿಗೆ ಸಮಾಲೋಚಿಸಿ ಹಾಗೂ ಖನಿಜ ನೀತಿಯನ್ನಾಧರಿಸಿ

ಎಂ.ಎಂ. (ಡಿ&ಆರ್)ಕಾಯ್ದೆ, ಎಂ.ಸಿ.ಆರ್. ಹಾಗೂ ಎಂ.ಸಿ.ಡಿ.ಆರ್.ಗಳನ್ನು ತಿದ್ದುಪಡಿ ಮಾಡುತ್ತಿದೆ. ಇದರಿಂದಾಗಿ ಹಾಗೂ ಕರ್ನಾಟಕದ ಖನಿಜ ವಲಯದ ಬೆಳವಣಿಗೆ ಹಾಗೂ ಅಭಿವೃದ್ಧಿಯನ್ನು ಕ್ರಮಬದ್ಧಗೊಳಿಸಿ ಖನಿಜ ನೀತಿಯಲ್ಲಿ ಹಾಗೂ ಸಂಬಂಧಪಟ್ಟ ಕಾನೂನುಗಳಲ್ಲಿ ಮಾರ್ಪಾಟು ಮಾಡಬೇಕಾದ ಅಗತ್ಯ ಉಂಟಾಗಿದೆ. ರಾಷ್ಟ್ರೀಯ ಖನಿಜ ನೀತಿಯ ನಿಲುವಿನ ಮೇರೆಗೆ, ಕರ್ನಾಟಕ ಸರ್ಕಾರವು ಖನಿಜ ನೀತಿ, 2008ಅನ್ನು ರೂಪಿಸಿದೆ.

**5 ಕರ್ನಾಟಕ ರಾಜ್ಯ ಖನಿಜ ನೀತಿ, 2008:–**

ಕರ್ನಾಟಕ ರಾಜ್ಯವು, ದೇಶದಲ್ಲಿ ಕೆಲವೇ ಇತರ ರಾಜ್ಯಗಳಲ್ಲಿ, ತನ್ನದೇ ಆದ ದೂರದೃಷ್ಟಿ ಹೊಂದಿದ ಖನಿಜ ನೀತಿಯನ್ನು 2000ದಲ್ಲಿ ರೂಪಿಸಿದ ಖ್ಯಾತಿ ಹೊಂದಿದೆ. ಈ ಖನಿಜ ನೀತಿಯು ಅತ್ಯಾಧುನಿಕ ತಂತ್ರಜ್ಞಾನ ಬಳಕೆಯ ಗಣಿಗಾರಿಕೆ, ಗಣಿಗಾರಿಕಾ ಮಂಜೂರಾತಿಯಲ್ಲಿ ಪಾರದರ್ಶಕತೆ, ಖನಿಜದ ಮೌಲ್ಯವೃದ್ಧಿ ಇತ್ಯಾದಿಗಳನ್ನು ಹೊಂದಿತ್ತು.

5.1: ಆರ್ಥಿಕ ಸುಧಾರಣೆಯ ಮೂಲಕ ಮತ್ತು ಗಣಿ ಉದ್ದಿಮೆಯನ್ನು ಒಳಗೊಂಡಂತೆ ಅನೇಕ ಉದ್ದಿಮೆಗಳನ್ನು ಸ್ಥಾಪಿಸುವಲ್ಲಿ, ಕರ್ನಾಟಕ ರಾಜ್ಯವು ವಿವಿಧ ಕ್ಷೇತ್ರ ಗಳಲ್ಲಿ ಗಣನೀಯ ಪ್ರಗತಿಯನ್ನು ಸಾಧಿಸಿದೆ. ಇತ್ತೀಚಿನ ಖನಿಜಾಭಿವೃದ್ಧಿ ಯಿಂದ, ಮಾರುಕಟ್ಟೆಯ ನಡೆ, ಮುಂದಿನ ಬೆಳವಣಿಗೆಗೆ ಪ್ರೋತ್ಸಾಹ ಮತ್ತು ಖನಿಜಾಧಾರಿತ ಕಚ್ಚಾವಸ್ತುಗಳ ಬೇಡಿಕೆಯಿಂದಾಗಿ ರಾಜ್ಯ ಖನಿಜ ನೀತಿಯನ್ನು ಪುನರ್ ಪರಿಶೀಲಿಸಬೇಕಾಗಿದೆ. ಖನಿಜ ಸಂಪತ್ತಿನ ಗಣಿಗಾರಿಕೆಯ ಬೆಳವಣಿಗೆಯ ಜೊತೆಗೆ ಮೌಲ್ಯವರ್ಧನೆಯ ಅವಶ್ಯಕತೆಗಳನ್ನು ವಿಸ್ತರಿಸಲು ಪ್ರೋತ್ಸಾಹ ನೀಡುವುದನ್ನು ಗಮನದಲ್ಲಿಟ್ಟುಕೊಂಡು ಖನಿಜ ನೀತಿ ರೂಪಿಸಲು ರಾಜ್ಯ ಸರ್ಕಾರ ಕ್ರಮ ಕೈಗೊಂಡಿದೆ.

5.2: **ರಾಜ್ಯ ಖನಿಜ ನೀತಿಯ ಮುಖ್ಯ ಧ್ಯೇಯೋದ್ದೇಶಗಳು ಮುಂದಿನಂತಿವೆ:–**

1. ಅತ್ಯಾಧುನಿಕ ತಂತ್ರಜ್ಞಾನವನ್ನು ಬಳಸಿ ರಾಜ್ಯದಲ್ಲಿನ ಖನಿಜ ಸಂಪನ್ಮೂಲಗಳನ್ನು ಪರಿಶೋಧಿಸಲು ಮಹತ್ವ ನೀಡುವುದು. ಖಾಸಗಿ ಹಾಗೂ ಸಾರ್ವಜನಿಕ ಉದ್ದಿಮೆ ಕಂಪೆನಿಗಳ ಬೆಂಬಲದಿಂದ ಅತ್ಯಾಧುನಿಕ ತಂತ್ರಜ್ಞಾನದ ಬಳಕೆಗೆ ಉತ್ತೇಜನ ನೀಡುವುದು;
2. ರಾಜ್ಯದಲ್ಲಿ ಈಗಿರುವ ಅರಣ್ಯ ಸಂಪತ್ತಿಗೆ ಮತ್ತು ಜೀವವೈವಿಧ್ಯತೆಗೆ ಧಕ್ಕೆ ಯಾಗದಂತೆ ಖನಿಜ ರಿಯಾಯಿತಿ ನೀಡುವ ನೀತಿಯನ್ನು ಅವಶ್ಯಕವಾಗಿ ಪಾಲಿಸುವುದು ಹಾಗೂ ಅತ್ಯಮೂಲ್ಯ ಅರಣ್ಯ ಸಂಪತ್ತನ್ನು ಗಣಿಗಾರಿಕೆಗೆ ಅನುಮತಿ ನೀಡುವಲ್ಲಿ ಕಾಪಾಡುವುದು;
3. ಗಣಿಗಾರಿಕೆಗೆ ರಿಯಾಯಿತಿ ನೀಡುವಲ್ಲಿ ಪಾರದರ್ಶಕತೆ ಉತ್ತೇಜಿಸುವುದು. ರಾಜ್ಯದಲ್ಲಿ ಉತ್ಪಾದಿಸಿದ ಖನಿಜಗಳಿಗೆ ಹೆಚ್ಚಿನ ಮೌಲ್ಯವರ್ಧನೆಗಾಗಿ, ಕೆಳಗಿನ ಕೈಗಾರಿಕೆಗಳಿಗೆ ಗರಿಷ್ಠ ಆರ್ಥಿಕ ವಿನಿಯೋಗವಾಗುವಂತೆ ಉತ್ತೇಜನ ನೀಡುವುದು. ಖನಿಜಗಳು ಲಭ್ಯವಿರುವ ಪ್ರದೇಶಗಳ ಹತ್ತಿರ ಕೈಗಾರಿಕೆ ಸ್ಥಾಪಿಸುವವರಿಗೆ ಖನಿಜ ರಿಯಾಯಿತಿಯಲ್ಲಿ ಆದ್ಯತೆ ನೀಡುವುದು;
4. ಖನಿಜಗಳ ಗಣಿಗಾರಿಕೆ ಮತ್ತು ಇತರೆ ಅಭಿವೃದ್ಧಿ ಕಾರ್ಯಗಳ ಮಧ್ಯೆ ಉಂಟಾಗುವ ಸಮಸ್ಯೆಗಳನ್ನು ಹೋಗಲಾಡಿಸುವ ಉದ್ದೇಶದಿಂದ ಸರ್ಕಾರವು ಖನಿಜ ಲಭ್ಯತೆಯಿರುವ ಪ್ರದೇಶಗಳನ್ನು ಪ್ರಕಟಿಸುವ ಸಾಧ್ಯತೆಯನ್ನು ಪರಿಶೀಲಿಸುವುದು;
5. ಅದಿರು ಕಣಗಳ (ಫೈನ್ಸ್) ದೇಶೀಯ ಬಳಕೆಗೆ ಹಾಗೂ ಕಡಿಮೆ ದರ್ಜೆಯ ಅದಿರಿನ ಖನಿಜ ಸಂಸ್ಕರಣೆಗೆ ಉತ್ತೇಜನ ನೀಡುವ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡುವುದು;
6. ಗಣಿಗಾರಿಕೆ ಯೋಜನೆಯ ಪ್ರಕಾರ ಗಣಿಗಾರಿಕೆ ನಡೆಯುತ್ತಿರುವುದನ್ನು ದೃಢಪಡಿಸಿಕೊಳ್ಳಲು ಮತ್ತು ಉತ್ಪಾದನೆಯಿಲ್ಲದೆ ಹೆಚ್ಚು ಖನಿಜ ಸಂಪತ್ತನ್ನು ಹೊಂದುವುದನ್ನು ಪ್ರೋತ್ಸಾಹಿಸದಿರಲು, ರಾಷ್ಟ್ರೀಯ:ಖಾಸಗೀ ಸಂಸ್ಥೆಗಳಿಗೆ ನೀಡಿರುವ ಗಣಿ ಪ್ರದೇಶಗಳನ್ನು ಪರಿಶೀಲಿಸುವುದು;
7. ರೈತರ ಜಮೀನಿನಲ್ಲಿ ದೊರೆಯುವ ಫ್ಲೋಟ್ ಕಬ್ಬಿಣದ ಖನಿಜವನ್ನು ಹೊರ ತೆಗೆಯಲು ಹಾಗೂ ಇಂತಹ ಜಮೀನುಗಳಲ್ಲಿ ಹೊಂದಿರುವ ಕೃಷಿಕರ ಸಮಸ್ಯೆ ಗಳನ್ನು ಪರಿಹರಿಸಲು ಸರ್ಕಾರವು ಒಂದು ಸೂಕ್ತವಾದ ಯೋಜನೆಯನ್ನು ರೂಪಿಸುವುದು. ಈ ನಿಟ್ಟಿನಲ್ಲಿ ಸರ್ಕಾರಿ ಸ್ವಾಮ್ಯ ಸಂಸ್ಥೆಗಳು, ರೈತ ಸಂಘಟನೆಗಳು:ಸಹಕಾರಿ ಸಂಸ್ಥೆಗಳು, ಉದ್ಯಮಿಗಳ ಪರಿಗಣನೆಗೆ ಯಾದಿಯನ್ನು ತಯಾರಿಸಲಾಗುವುದು;
8. ವಿಶಾಲವಾದ ಮತ್ತು ಬೃಹತ್ ನಿಕ್ಷೇಪಗಳಲ್ಲಿ, ವೈಜ್ಞಾನಿಕ ಗಣಿಗಾರಿಕೆಗೆ ಮತ್ತು ಪೂರ್ಣವಾಗಿ ನಿಕ್ಷೇಪ ಉಪಯೋಗವಾಗುವಂತೆ, ಕನಿಷ್ಠ ಗಣಿಗುತ್ತಿಗೆ ಪ್ರದೇಶವನ್ನು ನಿಯಮಗಳ ಚೌಕಟ್ಟಿನಡಿಯಲ್ಲಿ ನಿಗದಿಪಡಿಸಲಾಗುವುದು;
9. ಗಣಿ ಕಾರ್ಮಿಕರ ಉತ್ತಮ ಜೀವನ ಮಟ್ಟಕ್ಕಾಗಿ ಮತ್ತು ಅವರ ಕುಟುಂಬಗಳ ಕ್ಷೇಮಕ್ಕಾಗಿ, ಕಾನೂನಿನ ಪ್ರಕಾರ ನೀಡಬೇಕಾದ ಕನಿಷ್ಠ ವೇತನ ಮತ್ತು ಇತರ ಸೌಲಭ್ಯಗಳು ದೊರಕುವಂತೆ ಕ್ರಮ ಜರುಗಿಸಲಾಗುವುದು. ತವರ ಕಾರ್ಯಕ್ಷೇತದ ಹತ್ತಿರವಿರುವ ಪಟ್ಟಣಗಳಲ್ಲಿ ಆರೋಗ್ಯ, ಶಿಕ್ಷಣ, ಮನರಂಜನೆ ಮತ್ತು ಇತರೇ ಉಪಯುಕ್ತತೆಗಳನ್ನು ಅಭಿವೃದ್ಧಿಪಡಿಸಲಾಗುವುದು;
10. ರಾಜ್ಯದಲ್ಲಿ ಗಣಿ ಕ್ಷೇತಕ್ಕೆ ಸಂಬಂಧಿಸಿದ ಮಾಹಿತಿಗಳಾದ ಸಂಪನ್ಮೂಲ, ಗಣಿ ಗಾರಿಕೆಗಾಗಿ ನೀಡಿರುವ ಪರವಾನಗಿಗಳ ವಿವರ, ಉತ್ಪಾದನಮಟ್ಟ, ರಫ್ತು, ಸ್ಥಳೀಯ ಬಳಕೆ, ಮೌಲ್ಯವರ್ಧನೆ, ಇತ್ಯಾದಿ ಮಾಹಿತಿಗಳನ್ನು ಕ್ರಮಬದ್ಧವಾಗಿ ದಾಖಲಿಸಿ, ಉದ್ದಿಮೆದಾರರಿಗೆ ಮಾಹಿತಿ ತಂತ್ರಜ್ಞಾನ ಮುಖೇನ ಲಭ್ಯವಾಗುವಂತೆ ಮಾಡಲಾಗುವುದು;
11. ಗಣಿಗಾರಿಕೆಯಿಂದ ಸಂಗಹಿಸಲಾದ ರಾಜಧನವನ್ನು ಗಣಿಗಾರಿಕೆ ಪ್ರದೇಶ:ಜಿಲ್ಲೆಗಳ ಅಭಿವೃದ್ಧಿಗೆ ಒದಗಿಸುವುದು;
12. ಖನಿಜ ವ್ಯಾಪಾರ ಮತ್ತು ಸ್ಟಾಕ್‌ಯಾರ್ಡ್‌ಗಳ ಪರವಾನಗಿ ಮತ್ತು ನಿಯಂತ್ರಣಕ್ಕಾಗಿ ನಿಯಮಾವಳಿಗಳನ್ನು ರೂಪಿಸುವುದು ಮತ್ತು ಅವರುಗಳು ಕಾಯ್ದೆ ಮತ್ತು ನಿಯಮಗಳನ್ನು ಪಾಲಿಸುವಂತೆ ನೋಡಿಕೊಳ್ಳುವುದು;

13. ರಾಜ್ಯದಲ್ಲಿ ಖನಿಜ ನಿಕ್ಷೇಪಗಳ ಅನ್ವೇಷಣೆಯೊಂದಿಗೆ ಕರಾವಳಿ ತೀರದ ಖನಿಜ ನಿಕ್ಷೇಪದ ಮತ್ತು ಸಮುದ್ರ ತಳದ ನಿಕ್ಷೇಪದ ಸಂಶೋಧನೆ ನಡೆಸುವುದು;
14. ಉಪಖನಿಜಗಳ ಆಡಳಿತ ನಿರ್ವಹಣೆಯನ್ನು ಪರಿಶೀಲಿಸುವುದು ಮತ್ತು ಕಾರ್ಯ ವಿಧಾನದಲ್ಲಿ ಏಕರೂಪತೆ ತರುವುದು;
15. ಉದ್ದಿಮೆಗಳು ಕಾರ್ಪೋರೇಟ್ ವಲಯಗಳ ಸಾಮಾಜಿಕ ಜವಾಬ್ದಾರಿಯನ್ನು (ಸಿ.ಎಸ್.ಆರ್.) ಪಾಲಿಸುವಂತೆ ಉತ್ತೇಜಿಸುವುದು.

**6 ಖನಿಜಾಧಾರಿತ ಕೈಗಾರಿಕೆಗಳು:–**

6.1: ಗಣಿಗಾರಿಕೆಯಿಂದ ಹೆಚ್ಚಿನ ಉದ್ಯೋಗಾವಕಾಶಗಳು ಸೃಷ್ಟಿಯಾಗುವುದರಿಂದ, ಗಣಿಗಾರಿಕೆಯನ್ನು ಒಂದು ಉದ್ಯಮವಾಗಿ ಉತ್ತೇಜಿಸುವ ಅವಶ್ಯಕತೆಯಿದೆ. ಇದು ಸಂಪನ್ಮೂಲವನ್ನು ಸಂಪತ್ತಾಗಿ ಪರಿವರ್ತಿಸಿ ಮೌಲ್ಯವನ್ನು ಸೃಷ್ಟಿಸುತ್ತದೆ.

6.2: ಲಭ್ಯವಿರುವ ಕಚ್ಚಾವಸ್ತುಗಳ ಸಂಪನ್ಮೂಲಕ್ಕೆ ಸಮನಾಗಿ ಹೊಸ ಖನಿಜಾಧಾರಿತ ಕೈಗಾರಿಕೆಗಳನ್ನು ಸ್ಥಾಪಿಸುವುದು.

6.3: ಕಾರ್ಯನಿರತ ಮತ್ತು ಹೊಸ ಕೈಗಾರಿಕೆಗಳು ಕಚ್ಚಾ ಖನಿಜ ವಸ್ತುಗಳನ್ನು ಪರಿಶೋಧಿಸುವ, ಪರಿಷ್ಕರಿಸುವ, ಸಿಂಟರಿಂಗ್ ಮತ್ತು ಪೆಲೆಟೈಸೇಷನ್ ಘಟಕ ಗಳನ್ನು ಸ್ಥಾಪಿಸಬೇಕು.

6.4: ಈ ಕೈಗಾರಿಕೆಗಳು ಹೆಚ್ಚು ಉದ್ಯೋಗಾವಕಾಶಗಳನ್ನು ಕಲ್ಪಿಸುವುದಲ್ಲದೆ, ಪೂರಕ ಕೈಗಾರಿಕೆಗಳು ಸೃಷ್ಠಿ ಯಾಗುವುದು.

**7. ಸಮೀಕ್ಷೆ ಮತ್ತು ಪರಿಶೋಧನೆ:–**

7.1: ರಾಜ್ಯ ಗಣಿ ಮತ್ತು ಭೂವಿಜ್ಞಾನ ಇಲಾಖೆ ಮತ್ತು ಭಾರತೀಯ ಭೂವಿಜ್ಞಾನ ಸಮೀಕ್ಷೆ ಇಲಾಖೆಗಳು, ರಾಜ್ಯದಲ್ಲಿ ಕಂಡುಬರುವ ಖನಿಜಗಳ ಸಮೀಕ್ಷೆ ಮತ್ತು ಪರಿಶೋಧನೆಯನ್ನು ಕೈಗೊಳ್ಳುವ ಎರಡು ಪಮುಖ ಏಜೆನ್ಸಿಗಳಾಗಿವೆ. ಹೊಸ ಖನಿಜ ನಿಕ್ಷೇಪಗಳನ್ನು ಪತ್ತೆಹಚ್ಚಲು ಈ ಕಾರ್ಯಚಟುವಟಿಕೆಗಳನ್ನು ಅತ್ಯಾಧುನಿಕ ತಂತ್ರಜ್ಞಾನ ಬಳಸಿ ಮತ್ತಷ್ಟು ಮುಂದುವರೆಸಿ ಬಲಪಡಿಸ ಬೇಕಾಗಿದೆ. ಈ ತಂತ್ರಜ್ಞಾನವನ್ನು ಹೊಂದಿರುವ ಖಾಸಗಿ ಉದ್ದಿಮೆದಾರರಿಗೆ ಹೊಸ ಖನಿಜನಿಕ್ಷೇಪಗಳನ್ನು ತ್ವರಿತವಾಗಿ ಪತ್ತೆಹಚ್ಚಲು ಪ್ರೋತ್ಸಾಹಿಸ ಲಾಗುವುದು.

7.2: ಕರ್ನಾಟಕವು 320 ಕಿ.ಮೀ. ತೀರ ಪದೇಶವನ್ನು ಹೊಂದಿರುವುದರಿಂದ, ತೀರ ಪದೇಶದ ಖನಿಜಾನ್ವೇಷಣೆ ಜೊತೆಗೆ ಸಮುದ ತಳದಿಂದ ವಿಶಿಷ್ಠ ಆರ್ಥಿಕ ವಲಯದವರೆಗೆ ಅನ್ವೇಷಣೆ ಕೈಗೊಳ್ಳಬೇಕಿದೆ. ಈ ಕಾರ್ಯಕ್ಕಾಗಿ ರಾಜ್ಯವು ಭೂವಿಜ್ಞಾನ ಮಂತಾಲಯ ಮತ್ತು ಭಾರತೀಯ ಭೂವಿಜ್ಞಾನ ಸಂಸ್ಥೆಗಳ ಜೊತೆ ಸಹಕರಿಸುವುದು.

7.3: ಚಿನ್ನ, ಮೂಲ ಲೋಹಗಳು, ಪ್ಲಾಟಿನಂ ಗುಂಪಿನ ಖನಿಜಗಳು, ಇಲ್ಮನೈಟ್, ವಜ್ರ ಹಾಗೂ ಕಡಿಮೆ ದರ್ಜೆ ಕಬ್ಬಿಣದ ಅದಿರಿನ ನಿಕ್ಷೇಪಗಳನ್ನು ಅನ್ವೇಷಣೆ ಮಾಡಲು ವಿಶೇಷ ಆಸ್ತೆ ನೀಡಲಾಗುವುದು.

7.4: ರಾಜ್ಯಕ್ಕೆ ಗರಿಷ್ಠ ಮಟ್ಟದಲ್ಲಿ ಉಪಯೋಗವಾಗುವಂತಹ ಯೋಜನೆಗಳು ಹಾಗೂ ಕಾರ್ಯಕ್ರಮಗಳನ್ನು ಸ್ಟೇಟ್ ಜಿಯಾಲಜಿಕಲ್ ಪೋಗಾಮಿಂಗ್ ಬೋರ್ಡ್‌ನಲ್ಲಿ ರೂಪಿಸಲು ಆದ್ಯತೆ ನೀಡಲಾಗುವುದು.

**8 ವೈಜ್ಞಾನಿಕ ಮತ್ತು ವ್ಯವಸ್ಥಿತ ಗಣಿಗಾರಿಕೆ:–**

8.1: ಅಮೂಲ್ಯವಾದ ಸ್ವಾಭಾವಿಕ ಸಂಪನ್ಮೂಲಗಳು ನಿಷ್ಪ್ರಯೋಜಕವಾಗದ ಹಾಗೆ ವ್ಯವಸ್ಥಿತ ಮತ್ತು ವೈಜ್ಞಾನಿಕ ಗಣಿಗಾರಿಕೆಯನ್ನು ಕಾರ್ಯರೂಪಕ್ಕೆ ತರಲು ಇದು ಸಕಾಲ. ರಾಜ್ಯ ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇಂಡಿಯನ್ ಬ್ಯೂರೋ ಆಫ್ ಮೈನ್ಸ್(ಐಬಿಎಂ) ಮತ್ತು ಗಣಿ ರಕ್ಷಣಾ ಇಲಾಖೆಗಳು, ವ್ಯವಸ್ಥಿತ ಮತ್ತು ವೈಜ್ಞಾನಿಕ ಗಣಿಗಾರಿಕೆಯನ್ನು ಜಾರಿಗೊಳಿಸುವ ಪ್ರಾಧಿಕಾರಗಳಾಗಿವೆ. ವೈಜ್ಞಾನಿಕವಾಗಿ ಮತ್ತು ಖನಿಜಗಳನ್ನು ವ್ಯರ್ಥವಾಗದಂತೆ ಸಂಪೂರ್ಣವಾಗಿ ಬಳಸಿಕೊಳ್ಳುವ ಗಣಿಗಾರಿಕೆಯ ಉದ್ದೇಶಗಳನ್ನು ಈಡೇರಿಸಲು ಈ ಇಲಾಖೆಗಳ ನಡುವೆ ಉತ್ತಮ ಸಮನ್ವಯವನ್ನು ಸಾಧಿಸಲು ಸಂಘಟಿತ ಪಯತ್ನಗಳನ್ನು ಕೈಗೆತ್ತಿಕೊಳ್ಳಲಾಗುವುದು.

8.2: ಖಾಸಗಿ ಉದ್ದಿಮೆಗಳ ಜೊತೆ ಅತ್ಯಾಧುನಿಕ ತಂತಜ್ಞಾನವನ್ನು ಬಳಸಿಕೊಂಡು, ನಿಕ್ಷೇಪವಿದ್ದು ಮುಚ್ಚಿರುವ ಗಣಿಗಳನ್ನು ಪುನ: ಪಾರಂಭಿಸುವ ಸಾಧ್ಯತೆಯನ್ನು ಪರಿಶೀಲಿಸಲಾಗುವುದು.

**9 <u>ಗಣಿಗಾರಿಕೆ ಮತ್ತು ಪರಿಸರ:–</u>**

9.1: ಖನಿಜ ಸಂಪನ್ಮೂಲಗಳ ಸಹನಶೀಲ ಬೆಳವಣಿಗೆಗೆ ಖನಿಜ ಪ್ರದೇಶಗಳ ಬಳಕೆ ಯನ್ನು ಅರಣ್ಯ, ಪರಿಸರ ಮತ್ತು ಜೈವಿಕ ವೈವಿಧ್ಯವನ್ನು ಸಂರಕ್ಷಿಸುವುದ ರೊಂದಿಗೆ, ಅಭಿವೃದ್ಧಿಯ ಅವಶ್ಯಕತೆಗಳ ತುಲನಾತ್ಮಕ ದೃಷ್ಟಿಕೋನದಡಿಯಲ್ಲಿ ನಿರ್ವಹಿಸಲಾಗುವುದು. ಗಣಿಗುತ್ತಿಗೆದಾರರು ಪರಿಸರ ಸಂಬಂಧಿ ಕಾನೂನು ಗಳನ್ನು ಪಾಲಿಸುವಂತೆ ಅರಣ್ಯ, ಜೈವಿಕ ಸಂರಕ್ಷಣೆ ಮತ್ತು ಪರಿಸರ ಇಲಾಖೆ ಮೂಲಕ ನೋಡಿಕೊಳ್ಳಲಾಗುವುದು.

9.2: ಗಣಿಗಾರಿಕೆಯಿಂದ ಬರುವ ತ್ಯಾಜ್ಯಗಳನ್ನು ಉಪಯುಕ್ತತೆಗೆ ತರಲು ಪಯತ್ನಿಸ ಲಾಗುವುದು. ಪರಿಸರದ ಮೇಲಾಗುವ ಹಾನಿಯನ್ನು ಕಡಿಮೆ ಮಾಡಲು ಶೂನ್ಯ ತ್ಯಾಜ್ಯ ಗಣಿಗಾರಿಕೆಯನ್ನು ಉತ್ತೇಜಿಸಲಾಗುವುದು.

9.3: ಪಶ್ಚಿಮಘಟ್ಟಗಳು ಅಪರೂಪದ ಜೀವಪಬೇಧಗಳನ್ನು ಹೊಂದಿದ, ದಟ್ಟವಾದ ನಿತ್ಯ ಹರಿದ್ವರ್ಣ ಕಾಡನ್ನು ಹೊಂದಿವೆ. ಈ ಪದೇಶವು ಜೀವಿ ಪರಿಸರ ದೃಷ್ಠಿಯಿಂದ ಸೂಕ್ಷ್ಮ ಪದೇಶವಾಗಿದೆ. ರಾಜ್ಯದ ಮಳೆಯ ರೀತಿಯ ಮೇಲೆ ಪಶ್ಚಿಮಘಟ್ಟಗಳು ಪಭಾವ ಬೀರುತ್ತವೆ. ಆದರೆ, ಮುಂದಿನ ದಿನಗಳಲ್ಲಿ ಅರಣ್ಯ ಪದೇಶದಲ್ಲಿ ಕಡಿಮೆ ಧಕ್ಕೆಯಾಗುವಂತೆ ಅತ್ಯಾಧುನಿಕ ತಂತಜ್ಞಾನವನ್ನು ಬಳಸಿ, ಖನಿಜವನ್ನು ಹೊರತೆಗೆಯುವ ಸಾಧ್ಯತೆ ಇರುವುದರಿಂದ, ಕಾಡಿನ ಜೀವಿ ಪರಿಸರಕ್ಕೆ ಯಾವುದೇ ತೊಂದರೆಯಾಗದಂತೆ ಖನಿಜ ಸಂಪನ್ಮೂಲಗಳ ಸಮೀಕ್ಷೆಗೆ ಹಾಗೂ ಪರಿಶೋಧನೆಗೆ ಅವಕಾಶ ನೀಡಲಾಗುವುದು.

9.4: ಪಶ್ಚಿಮಘಟ್ಟದಲ್ಲಿ ಸಂರಕ್ಷಿಸಬೇಕಾದ ದಟ್ಟ ಗಿಡಮರಗಳಿರುವ ಪ್ರದೇಶಗಳನ್ನು ಅರಣ್ಯ ಇಲಾಖೆಯವರು ಸ್ಪಷ್ಟವಾಗಿ ಗುರುತು ಮಾಡಿ, ಆ ಪ್ರದೇಶವನ್ನು ಜೀವಿ ಪರಿಸರ ದೃಷ್ಟಿಯಿಂದ ಸೂಕ್ಷ್ಮ ಪ್ರದೇಶವೆಂದು ಘೋಷಿಸಲಾಗುವುದು.

10. **ಮೂಲಭೂತ ಸೌಕರ್ಯಗಳ ಅಭಿವೃದ್ಧಿ:–**

10.1: ಖನಿಜಗಳನ್ನು ತೆಗೆಯುವುದು ಮತ್ತು ಬಳಸುವುದನ್ನು ಸುಸ್ಥಿರವಾಗಿ ನಿರ್ವಹಿಸಿ ಅಭಿವೃದ್ಧಿಪಡಿಸಲು ಹಾಗೂ ಖನಿಜಾಧಾರಿತ ಕೈಗಾರಿಕೆಗಳನ್ನು ಉತ್ತೇಜಿಸಲು, ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಅಗತ್ಯವಾಗಿದೆ. ಗಣಿ ಪ್ರದೇಶದಲ್ಲಿ ಈಗಿರುವ ಮೂಲಭೂತ ಸೌಲಭ್ಯಗಳು ಸಮರ್ಪಕವಾಗಿಲ್ಲ. ಆದ್ದರಿಂದ, ಗಣಿ ಪ್ರದೇಶದ ರಸ್ತೆಗಳ ಮತ್ತು ರೈಲ್ವೇ ನಿಲ್ದಾಣ:ಬಂದರುಗಳಿಗೆ ಸಂಪರ್ಕ ಕಲ್ಪಿಸುವ ರಸ್ತೆಗಳ ಅಭಿವೃದ್ಧಿಗೆ ಹೆಚ್ಚಿನ ಆದ್ಯತೆ ನೀಡಲಾಗುವುದು.

10.2: ಗಣಿ ಪ್ರದೇಶದಿಂದ ಅದಿರನ್ನು ರೈಲ್ವೇ ಸೈಡಿಂಗ್:ಸಂಗ್ರಹಗಾರ ಪ್ರದೇಶಕ್ಕೆ ಕನ್ವೇಯರ್ ಬೆಲ್ಟ್, ರೋಪ್‌ವೇ ಮೂಲಕ ಮತ್ತು ಇದೇ ರೀತಿಯ ಇತರ ಸೌಲಭ್ಯಗಳನ್ನು ಬಳಸಿ ಸಾಗಿಸುವುದನ್ನು ಪ್ರೋತ್ಸಾಹಿಸಲಾಗುವುದು. ಇದರಿಂದ ಪಕ್ಕದ ಹಳ್ಳಿಗಳ ಪರಿಸರ ಮಾಲಿನ್ಯವಾಗುವುದು, ವಾಹನ ದಟ್ಟಣೆ, ರಸ್ತೆ ಹಾಳಾಗುವುದು ಮತ್ತು ಅಪಘಾತಗಳಾಗುವುದು, ಇವುಗಳನ್ನು ತಪ್ಪಿಸಬಹುದು. ಖನಿಜ ಸಾಗಾಣಿಕೆ ಮಾರ್ಗದಲ್ಲಿ ಬರುವ ಪಟ್ಟಣ ಮತ್ತು ಗ್ರಾಮಗಳಿಗೆ ಪರ್ಯಾಯ ರಸ್ತೆಗಳನ್ನು ಗುರುತಿಸಿ ಪಿ.ಪಿ.ಪಿ. ಆಧಾರದಲ್ಲಿ ರಚಿಸಿ ಅಭಿವೃದ್ಧಿ ಪಡಿಸಲಾಗುವುದು.

10.3: ಗಣಿ ಪ್ರದೇಶದ ಸುತ್ತಮುತ್ತಲಿನ ಮೂಲಭೂತ ಸೌಕರ್ಯಗಳನ್ನು ಅಭಿವೃದ್ಧಿ ಪಡಿಸಲು ರಾಜ್ಯ ಸರ್ಕಾರಗಳಿಗೆ ಸಹಕಾರ ನೀಡುವುದಾಗಿ ಭಾರತ ಸರ್ಕಾರವು ರಾಷ್ಟ್ರೀಯ ಖನಿಜ ನೀತಿ, 2008ರಲ್ಲಿ ಸ್ಪಷ್ಟವಾಗಿ ತಿಳಿಸಿದೆ. ಗಣಿ ಪ್ರದೇಶಗಳ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗೆ ಜೆ.ಎನ್.ಎನ್.ಯು. ಆರ್.ಎಂ. ಮಾದರಿಯಲ್ಲಿ ಸಮಗ್ರ ಯೋಜನೆ ರೂಪಿಸಲು ಕೇಂದ್ರ ಸರ್ಕಾರವನ್ನು ಕೋರಲಾಗುವುದು.

10.4: ಕೇಂದ್ರ ಸರ್ಕಾರದ ಮತ್ತು ರಾಜ್ಯ ಸರ್ಕಾರದ ಬಂದರು ಇಲಾಖೆಗಳ ಸಹಯೋಗದೊಂದಿಗೆ ಖನಿಜ ಮತ್ತು ಖನಿಜ ಉತ್ಪನ್ನಗಳನ್ನು ರಫ್ತು ಮಾಡಲು ಈಗಿರುವ ಬಂದರುಗಳ ಸಾಮರ್ಥ್ಯ ಹೆಚ್ಚಿಸಿ ಅಭಿವೃದ್ಧಿ ಪಡಿಸುವುದು ಮತ್ತು ಹೊಸ ಬಂದರುಗಳನ್ನು ನಿರ್ಮಾಣ ಮಾಡಲಾಗುವುದು.

11. **ಮಾನವ ಸಂಪನ್ಮೂಲಗಳ ಅಭಿವೃದ್ಧಿ:–**

11.1: ವೈಜ್ಞಾನಿಕ ರೀತಿಯಲ್ಲಿ ಗಣಿಗಳನ್ನು ಅಭಿವೃದ್ಧಿಪಡಿಸಲು ಬೇಕಾದ ಸಾಕಷ್ಟು ತರಬೇತಿ ಹೊಂದಿದ ಪರಿಣಿತರು ಎಲ್ಲಾ ಮಟ್ಟದಲ್ಲೂ ದೊರಕುವಂತೆ ಈಗಿರುವ ವಿದ್ಯಾಭ್ಯಾಸ ಮತ್ತು ತರಬೇತಿ ಸೌಲಭ್ಯಗಳನ್ನು ಸದಾಕಾಲ ಪರಿಶೀಲಿಸಲಾಗುವುದು. ಈ ವಿಭಾಗದಲ್ಲಿ ಮಾನವ ಸಂಪನ್ಮೂಲದ ಬೇಡಿಕೆಯನ್ನು ಸಮಗವಾಗಿ ಪರಿಶೀಲಿಸಲಾಗುವುದು. ಈ ಅವಶ್ಯಕತೆಗಳನ್ನು ಪೂರೈಸಲು ಶಿಕ್ಷಣ ಸಂಸ್ಥೆಗಳನ್ನು ಮೇಲ್ದರ್ಜೆಗೇರಿಸಲಾಗುವುದು. ಗಣಿಗಾರಿಕೆ, ಇಂಜಿನಿಯರಿಂಗ್ ಮತ್ತು ಗಣಿ ಯಂತ್ರೋಪಕರಣಗಳ ಬಗ್ಗೆ ಹೆಸರಾಂತ ಖನಿಜ ಸಂಸ್ಥೆಗಳ ಸಹಯೋಗದೊಂದಿಗೆ ಖನಿಜ ಸಂಶೋಧನೆ ಸಂಸ್ಥೆಯನ್ನು ಸ್ಥಾಪಿಸಿ ಗಣಿ ಉದ್ಯಮಕ್ಕಾಗಿ, ಹಳ್ಳಿಗಳಲ್ಲಿರುವ ತರಬೇತಿ ಇಲ್ಲದ ಜನರಿಗೆ ತರಬೇತಿ ನೀಡಲಾಗುವುದು.

11.2: ಖನಿಜ ಸಂಪನ್ಮೂಲಗಳ ಪರಿಶೋಧನೆಗಾಗಿ ರಾಜ್ಯದ ಗಣಿ ಮತ್ತು ಭೂವಿಜ್ಞಾನ ಇಲಾಖೆಯನ್ನು ಬಲಪಡಿಸಲಾಗುವುದು. ಪರಿಶೋಧನೆಯ ಆಧುನಿಕ ತಂತ್ರಗಳು ಮತ್ತು ಖನಿಜ ನಿರ್ವಹಣೆ ಕುರಿತಂತೆ, ಇಲಾಖೆಯಲ್ಲಿನ ಸಿಬ್ಬಂದಿಗೆ ರಾಷ್ಟ್ರೀಯ ಸಂಸ್ಥೆಗಳಲ್ಲಿ ನಿರಂತರವಾಗಿ ತರಬೇತಿಯನ್ನು ನೀಡ ಲಾಗುವುದು. ಈ ನಿಟ್ಟಿನಲ್ಲಿ ಭಾರತ ಸರ್ಕಾರವು, ರಾಷ್ಟ್ರೀಯ ಖನಿಜ ನೀತಿಯಲ್ಲಿ ನಿರೂಪಿಸಿರುವಂತೆ ರಾಜ್ಯ ಸರ್ಕಾರವನ್ನು ಬೆಂಬಲಿಸುವುದು.

11.3: ಇತ್ತೀಚಿನ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳಲು ಮತ್ತು ಕೈಗಾರಿಕೆಯ ಅಗತ್ಯತೆಗಳ ಬಗ್ಗೆ ತಿಳಿದುಕೊಳ್ಳಲು ಕೈಗಾರಿಕೆ ಮತ್ತು ಇಲಾಖೆಯ ನಡುವೆ ನಿಯತವಾಗಿ ಸಂವಾದವನ್ನು ಏರ್ಪಡಿಸಲಾಗುವುದು. ಅಗತ್ಯತೆಗಳನ್ನು ಪೂರೈಸಲು ಸೂಕ್ತ ಕ್ರಮವನ್ನು ತೆಗೆದುಕೊಳ್ಳಲಾಗುವುದು.

12. **ಖನಿಜಾಡಳಿತ:–**

12.1: ಗಣಿಗುತ್ತಿಗೆ ಪ್ರದೇಶದ ನಕ್ಷೆಯನ್ನು ಸರ್ವೇ ಆಫ್ ಇಂಡಿಯಾ ಟೋಪೋಶೀಟ್‌ಗಳ ಅಕ್ಷಾಂಶ ಮತ್ತು ರೇಖಾಂಶಗಳಿಗೆ ಪರಿವರ್ತಿಸುವುದು.

12.2: ಎಲ್ಲಾ ಭೂಪಟಗಳನ್ನು ಡಿಜಿಟೈಜ್ ಮಾಡುವುದು.

12.3: ಖನಿಜಗಳ ಸಾಗಾಣಿಕೆಯನ್ನು ಸುರಕ್ಷಿತ ಅಂಶಗಳನ್ನು ದಾಖಲಿಸಲಾದ ಇ–ಪರ್ಮಿಟ್ ಮೂಲಕ ಸಾಗಿಸುವುದನ್ನು ಜಾರಿಗೊಳಿಸಲಾಗುವುದು.

12.4: ನಿರ್ದಿಷ್ಠ ಉಪಖನಿಜಗಳ ಅರ್ಜಿಗಳ ತ್ವರಿತ ವಿಲೇವಾರಿಗಾಗಿ ಗ್ರಾನೈಟ್ ಸಂರಕ್ಷಣೆ ಮತ್ತು ಅಭಿವೃದ್ಧಿ ನಿಯಮಾವಳಿ, 1999ರನ್ವಯ ಏಕರೂಪ ವಿಧಾನಗಳನ್ನು ರೂಪಿಸಲಾಗುವುದು.

12.5: ಗ್ರಾಮ ಪಂಚಾಯಿತಿಗಳು ತಮ್ಮ ವ್ಯಾಪ್ತಿಯ ಪ್ರದೇಶದಲ್ಲಿನ ಹಳ್ಳಿಗಳ ಪಾತ್ರದಲ್ಲಿ ಸಾಧಾರಣ ಮರಳು ಗಣಿ ಗಾರಿಕೆ ಬಗ್ಗೆ ನಿಗಾ ವಹಿಸುವುದು. ಗ್ರಾನೈಟ್:ಮರಳು ಶಿಲೆಗಳಿಂದ ಮರಳು ಸಂಸ್ಕರಿಸುವ ಘಟಕಗಳ ಸ್ಥಾಪನೆಗೆ ಪ್ರೋತ್ಸಾಹ ಮತ್ತು ಸೌಲಭ್ಯಗಳನ್ನು ಒದಗಿಸಲಾಗುವುದು.

13. **ಖನಿಜ ವ್ಯಾಪಾರ:–**

13.1: ಖನಿಜ ರಿಯಾಯಿತಿ ನಿಯಮಾವಳಿ, 1960ರ ನಿಯಮ 64(ಸಿ) ರನ್ವಯ ಗುತ್ತಿಗೆದಾರರು ಗಣಿಯಿಂದ ತಿರಸ್ಕೃತ ಅಥವಾ ವ್ಯಾಪಾರ ಮಾಡಿದ ರಾಶಿಗಳಿಗೆ ಮತ್ತು ಸಂಸ್ಕರಿಸಿ ಉಪಯೋಗಿಸಲು ಸಾಗಾಣಿಕೆ ಮಾಡಿದಲ್ಲಿ, ರಾಜಧನ ಪಾವತಿಸಬೇಕಾಗುತ್ತದೆ. ಆದ್ದರಿಂದ, ವ್ಯಾಪಾರಿಗಳಿಂದ ಮಾರಾಟ ಬೆಲೆಗೆ ಅನುಗುಣವಾಗಿ ತೆರಿಗೆಯನ್ನು ಸಂಗ್ರಹಿಸಲು "ಕರ್ನಾಟಕ ಖನಿಜ ವ್ಯಾಪಾರ ನಿಯಮಗಳು" ಅನ್ನು ರಚಿಸಲು ಪ್ರಸ್ತಾಪಿಸಲಾಗಿದೆ.

**14 ಕಾನೂನುಬಾಹಿರ ಖನಿಜಗಳ ಗಣಿಗಾರಿಕೆ, ಸಾಗಣೆ ಮತ್ತು ಸಂಗಹಣೆ:–**

14.1: ಕಾನೂನುಬಾಹಿರ ಗಣಿಗಾರಿಕೆ, ಖನಿಜಗಳ ಸಾಗಣೆ ಮತ್ತು ಸಂಗಹಣೆಯನ್ನು ನಿಯಂತ್ರಿಸಲು ನಿಯಮಾವಳಿಗಳನ್ನು ರೂಪಿಸಲು ಎಂ.ಎಂ.(ಡಿ&ಆರ್) ಕಾಯ್ದೆ, 1957ರ 23(ಸಿ) ಪಕರಣದ ಅಡಿಯಲ್ಲಿ, ರಾಜ್ಯಗಳಿಗೆ ಅಧಿಕಾರ ನೀಡಲಾಗಿದೆ. ಉಪಬಂಧಗಳಿಗನುಸಾರವಾಗಿ ರಾಜ್ಯವು ನಿಯಮ ಗಳನ್ನು ರಚಿಸಿದೆ. ಕಾನೂನುಬಾಹಿರ ಗಣಿಗುತ್ತಿಗೆದಾರರ ವಿರುದ್ಧ ಕಠಿಣ ಕಮ ತೆಗೆದುಕೊಳ್ಳಲಾಗುವುದು. ಅಧಿಕೃತ ದಾಖಲೆಗಳಿಲ್ಲದೆ ಸಾಗಣೆ ಅಥವಾ ಸಂಗಹಣೆ ಮಾಡಿದ ಖನಿಜಗಳನ್ನು ರಾಜ್ಯಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಜಿಲ್ಲಾ ಕಾರ್ಯಪಡೆಗೆ ಮತ್ತು ಜಿಲ್ಲಾ ಅಧಿಕಾರಿ ಗಳಿಗೆ ಹೆಚ್ಚಿನ ಅಧಿಕಾರವನ್ನು ಪತ್ಯಾಯೋಜಿಸಲಾಗುವುದು.

14.2: ಗಣಿ ಮತ್ತು ಭೂವಿಜ್ಞಾನ ಇಲಾಖೆ, ಅರಣ್ಯ ಇಲಾಖೆ, ಕಂದಾಯ ಇಲಾಖೆ, ಇಂಡಿಯನ್ ಬ್ಯೂರೋ ಆಫ್ ಮೈನ್ಸ್ ಹಾಗೂ ಪರಿಸರ ಮಾಲಿನ್ಯ ನಿಯಂತ್ರಣ ಮಂಡಳಿಯ ಅಧಿಕಾರಿಗಳ ಜಂಟಿ ಕಾರ್ಯಪಡೆ ರಚಿಸಿ, ವಾರ್ಷಿಕವಾಗಿ, ಒಮ್ಮೆ ಜಂಟಿಯಾಗಿ ಸಮಗ ತಪಾಸಣೆ ನಡೆಸಿ, ಗುತ್ತಿಗೆ ಪದೇಶಗಳಲ್ಲಿಯ ಒತ್ತುವರಿಯನ್ನು ಗುರುತಿಸುವ ಒಂದು ಹೊಸ ಆಯಾಮಕ್ಕೆ ಚಾಲನೆ ಕೊಡಲಾಗುವುದು.

14.3: ಕ್ವಿಕ್ ಬರ್ಡ್ ಉಪಗಹ ಮಾಹಿತಿಯನ್ನು ಉಪಯೋಗಿಸಿ ಗಣಿ ಪದೇಶಗಳ ಒತ್ತುವರಿಗಳನ್ನು ಗುರುತಿಸಲಾಗುವುದು. ಇನ್ನು ಮುಂದೆ ಗಣಿ ಪದೇಶದ ನಿಖರತೆಯನ್ನು ಖಚಿತಪಡಿಸಿಕೊಳ್ಳಲು ಅಕ್ಷಾಂಶ ಮತ್ತು ರೇಖಾಂಶಗಳನ್ನು ಹೊಂದಿರುವ ಗಿಡ್ ಆಧಾರಿತ ನಕ್ಷೆಗಳನ್ನು ಹೊಸ ಗುತ್ತಿಗೆ:ನವೀಕರಣಕ್ಕೆ ಬರುವ ಅರ್ಜಿಗಳ ಜೊತೆ ಕಡ್ಡಾಯಗೊಳಿಸಲಾಗುವುದು. ಖನಿಜ ತನಿಖಾ ಠಾಣೆಗಳನ್ನು ಸುಸಜ್ಜಿತ ಯಂತೋಪಕರಣಗಳಿಂದ ಆಧುನೀಕರಿಸಿ ಅನಧಿಕೃತ ಸಾಗಾಣಿಕೆಯನ್ನು ಗುರುತಿಸಲಾಗುವುದು. ಅಕಮ ಗಣಿಗಾರಿಕೆ, ಸಾಗಾಣಿಕೆ ಮತ್ತು ಖನಿಜ ಸಂಗಹಣೆಯನ್ನು ತಡೆಗಟ್ಟಲು ಸಂಚಾರಿ ತನಿಖಾ ದಳಗಳನ್ನು ರಚಿಸಲಾಗುವುದು.

14.4: ತಪ್ಪಿತಸ್ಥರನ್ನು ವಿವಿಧ ಕಾಯ್ದೆ ಮತ್ತು ನಿಯಮಗಳಡಿಯಲ್ಲಿ ವಿಚಾರಣೆಗೆ ಒಳಪಡಿಸಲಾಗುವುದು. ಅಪರಾಧಕ್ಕೆ ಉಪಯೋಗಿಸಿದ ಉಪಕರಣ ಮತ್ತು ವಾಹನಗಳನ್ನು ವಶಪಡಿಸಿಕೊಂಡು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ತಪ್ಪಿತಸ್ಥರನ್ನು ಯಾವುದೇ ಹೊಸ ಗಣಿ ಮಂಜೂರಾತಿ ಅಥವಾ ನವೀಕರಣಗಳಲ್ಲಿ ಪರಿಗಣಿಸಲಾಗುವುದಿಲ್ಲ ಮತ್ತು ಯಾವುದೇ ಅನುಮತಿಗಳು ಮತ್ತು ರಿಯಾಯಿತಿಗಳನ್ನು ಪಡೆಯಲು ಅನರ್ಹಗೊಳಿಸಲಾಗುವುದು.

**15. <u>ನೀತಿಯ ಅನುಷ್ಠಾನ:–</u>**

15.1: ಕರ್ನಾಟಕ ರಾಜ್ಯ ಖನಿಜ ನೀತಿಯ ಅನುಷ್ಠಾನದ ಮೇಲ್ವಿಚಾರಣೆಯನ್ನು ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿನ ಸಮಿತಿಯು ನೋಡಿಕೊಳ್ಳುವುದು. ಈ ಸಮಿತಿಯಲ್ಲಿ ಗಣಿ ಮತ್ತು ಭೂವಿಜ್ಞಾನ ಇಲಾಖೆ, ಅರಣ್ಯ, ಕಂದಾಯ, ಲೋಕೋಪಯೋಗಿ, ಪರಿಸರ ಮಾಲಿನ್ಯ ನಿಯಂತ್ರಣ ಮಂಡಳಿ, ಇಂಡಿಯನ್ ಬ್ಯೂರೋ ಆಫ್ ಮೈನ್ಸ್, ಜಿಯಾಲಜಿಕಲ್ ಸರ್ವೇ ಆಫ್ ಇಂಡಿಯಾ, ಮೈನ್ಸ್ ಸೇಫ್ಟಿ ನಿರ್ದೇಶನಾಲಯ, ಗಣಿ ಉದ್ದಿಮೆಯ ಮತ್ತು ಇದೇ ರೀತಿಯ ಸಂಸ್ಥೆಗಳ ಪತಿನಿಧಿಗಳು ಸದಸ್ಯರಾಗಿರುತ್ತಾರೆ. ಇದಲ್ಲದೆ, ಎರಡು ಅಥವಾ ಮೂರು ಮಂದಿ ವಿಶೇಷ ಪರಿಣತಿ ಹೊಂದಿದ ತಜ್ಞರನ್ನು ಈ ಸಮಿತಿಯ ಸಹ ಸದಸ್ಯರನ್ನಾಗಿ ತೆಗೆದುಕೊಳ್ಳಬಹುದಾಗಿದೆ. ಈ ಸಮಿತಿಯು 6 ತಿಂಗಳಿಗೊಮ್ಮೆಯಾದರೂ ಸಭೆ ಸೇರಬೇಕು. ಗಣಿ ಸಚಿವರು ವರ್ಷಕ್ಕೊಮ್ಮೆ ನೀತಿಯ ಅನುಷ್ಠಾನವನ್ನು ಪರಿಶೀಲಿಸುತ್ತಾರೆ.

**ವಿ. ಉಮೇಶ್**
ಸರ್ಕಾರದ ಪಧಾನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**<u>–: ಅನುಬಂಧ – I :–</u>**

| ಕಮ ಸಂಖ್ಯೆ | ಖನಿಜದ ಹೆಸರು | ಒಟ್ಟು ಗುತ್ತಿಗೆಗಳ ಸಂಖ್ಯೆ | 2006-07ರಲ್ಲಿ ಮಾಡಲಾದ ಉತ್ಪಾದನೆ (ಮೆಟ್ರಿಕ್ ಟನ್ನುಗಳಲ್ಲಿ) |
|---|---|---|---|
| 1. | ಕಬ್ಬಿಣದ ಅದಿರು | 178 | 4,16,72,254 |
| 2. | ಮ್ಯಾಂಗನೀಸ್ | 37 | 1,82,064 |
| 3. | ಸೋಪ್ ಸ್ಟೋನ್ | 5 | 690 |
| 4. | ಎರಕದ ಮರಳು | 39 | 1,00,220 |
| 5. | ಸುಣ್ಣದ ಕಲ್ಲು/ಡೊಲೋಮೈಟ್ | 157 | 1,47,45,413 |
| 6. | ಕ್ವಾರ್ಟ್‌ಜೈಟ್ | 5 | - |
| 7. | ಅಲ್ಯೂಮಿನಿಯಂ ಲ್ಯಾಟರೈಟ್ | 6 | 1,75,748 |
| 8. | ಜೇಡಿಮಣ್ಣು | 14 | 30,603 |
| 9. | ಬಾಕ್ಸೈಟ್ | 4 | 1,15,797 |
| 10. | ಗ್ರಾಫೈಟ್ | 6 | 1,997 |
| 11. | ವರ್ಮೀಕ್ಯೂಲೈಟ್ | 2 | - |

| | | | |
|---|---|---|---|
| 12. | ಕಯನೈಟ್ | 6 | 2,264 |
| 13. | ಫೆಲ್ಸ್ಪೈಟ್ | 13 | 972 |
| 14. | ಮ್ಯಾಗ್ನಸೈಟ್ | 11 | 11,720 |
| 15. | ರೂಬಿ ಕೊರಂಡಮ್ | 7 | 10 |
| 16. | ಚಿನ್ನ/ತಾಮ | 6 | 23,94,722 |
| 17. | ಸಿಲಿಕಾ ಮರಳು | 23 | 2,06,541 |
| 18. | ಲೈಮ್‌ಷೆಲ್ | 17 | 7,17,182 |
| 19. | ಕ್ವಾರ್ಟ್ಜ್ | 44 | 57,371 |
| | **ಒಟ್ಟು** | **580** | **5,80,20,86,995** |

**ವಿ. ಉಮೇಶ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**–: ಅನುಬಂಧ – II :–**

| ಕಮ ಸಂಖ್ಯೆ | ವಿವಿಧ ಬಗೆಯ ಗ್ರಾನೈಟ್‌ಗಳು | ಸಂಪತ್ತು (ಮಿಲಿಯನ್ ಕ್ಯೂಬಿಕ್ ಮೀಟರ್) | ಗಣಿಗುತ್ತಿಗೆಗಳ ಸಂಖ್ಯೆ |
|---|---|---|---|
| 1. | ಪಿಂಕ್ ಮಲ್ಟಿಕಲರ್ಡ್ ಗ್ರಾನೈಟ್ | 133 | 288 |
| 2. | ಪಿಂಕ್ ಗ್ರಾನೈಟ್ | 15 | 205 |
| 3. | ಗ್ರೇ ಗ್ರಾನೈಟ್ | 65 | 130 |
| 4. | ಬ್ಲಾಕ್ ಗ್ರಾನೈಟ್/ಗ್ರೀನ್ ಗ್ರಾನೈಟ್ | 7 | 186 |
| 5. | ಯೆಲ್ಲೋ ಗ್ರಾನೈಟ್ | 4 | 4 |
| 6. | ಕ್ವಾರ್ಟ್ಜೈಟ್/ಸ್ಯಾಂಡ್ ಸ್ಟೋನ್ | 574 | - |
| | **ಒಟ್ಟು** | **798** | **813** |

**ಸೂಚನೆ:–**

1. ಚಾಲ್ತಿಯಲ್ಲಿರುವ ಒಟ್ಟು ಗುತ್ತಿಗೆಗಳು : 535
2. 2006-07ನೇ ಸಾಲಿನಲ್ಲಿ ಒಟ್ಟು
ಗ್ರಾನೈಟ್ ಉತ್ಪಾದನೆ : 1.9 ಲಕ್ಷ ಕ್ಯೂಬಿಕ್ ಮೀಟರ್.

**ವಿ. ಉಮೇಶ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**: ಅನುಬಂಧ – III :–**

**ಷೆಡ್ಯೂಲ್ – ಒಂದು**

**ನಿರ್ದಿಷ್ಟಪಡಿಸಲಾದ ಖನಿಜಗಳು**

**ಭಾಗ "ಎ"**

**ಹೈಡ್ರೋ ಕಾರ್ಬನ್ಸ್ / ಎನರ್ಜಿ ಮಿನರಲ್ಸ್**

1. ಕಲ್ಲಿದ್ದಲು ಮತ್ತು ಲಿಗ್‌ನೈಟ್

**ಭಾಗ "ಬಿ"**

**ಅಣು (ಅಟಾಮಿಕ್) ಖನಿಜಗಳು**

1. ಬೆರಿಲ್ ಮತ್ತು ಇತರೆ ಬೆರಿಲಿಯಂ ಹೊಂದಿದ ಖನಿಜಗಳು
2. ಲೀತಿಯಂ ಹೊಂದಿದ ಖನಿಜಗಳು
3. ಯುರೇನಿಯಂ ಮತ್ತು ತೋರಿಯಂ ಹೊಂದಿದ "ರೇರ್ ಅರ್ಥ್" ಗುಂಪಿನ ಖನಿಜಗಳು
4. ನಿಯೋಬಿಯಂ ಹೊಂದಿದ ಖನಿಜಗಳು
5. ಯುರೇನಿಯಂ ಹೊಂದಿದ ಫಾಸ್‌ಫೋರೈಟ್ಸ್ ಮತ್ತು ಇತರೆ ಫಾಸ್ಫಾಟಿಕ್ ಖನಿಜಗಳು
6. ಪಿಚ್‌ಬ್ಲೆಂಡ್ ಮತ್ತು ಇತರೆ ಯುರೇನಿಯಂ ಖನಿಜಗಳು

7. ಟೈಟಾನಿಯಂ ಹೊಂದಿದ ಖನಿಜಗಳು ಮತ್ತು ಅದಿರುಗಳು ಇಲ್ಮನೈಟ್, ರೂಟೈಲ್ ಮತ್ತು ಲಿಯೋಕಾಕ್ಸೀನ್)
8. ಟ್ಯಾಂಟಾಲಿಯಂ ಹೊಂದಿದ ಖನಿಜಗಳು
9. ಯುರೇನಿಯಂ ಹೊಂದಿದ ಅಲನೈಟ್, ಮಾನೋಜೈಟ್ ಮತ್ತು ಇತರೆ ತೋರಿಯಂ ಖನಿಜಗಳು
10. ತಾಮ್ರ, ಚಿನ್ನ, ಇಲ್ಮನೈಟ್ ಮತ್ತು ಇತರೆ ಟೈಟಾನಿಯಂ ಖನಿಜಗಳು ತೆಗೆದ ನಂತರ ಉಳಿದ ಯುರೇನಿಯಂ ಯುಕ್ತ ಟೇಲಿಂಗ್ಸ್
11. ಝಿರ್‌ಕಾನ್ ಸೇರಿ ಝಿರ್‌ಕೋನಿಯಂ ಯುಕ್ತ ಖನಿಜ ಮತ್ತು ಅದಿರುಗಳು.

**ವಿ. ಉಮೇಶ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಭಾಗ "ಸಿ"**

1. ಕಲ್ನಾರು
2. ಬಾಕ್ಸೈಟ್
3. ಕ್ರೋಂ ಅದಿರು
4. ತಾಮ್ರದ ಅದಿರು
5. ಚಿನ್ನ
6. ಕಬ್ಬಿಣದ ಅದಿರು
7. ಸೀಸ
8. ಮ್ಯಾಂಗನೀಸ್ ಅದಿರು
9. ಪಶಸ್ತ ಶಿಲೆಗಳು
10. ಸತು (ಝಿಂಕ್)

**ವಿ. ಉಮೇಶ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 1696

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ವಿಷಯ:** ಶ್ರೀಮತಿ ಸುನಂದಮ್ಮ ಬಸವನಗೌಡ ಅಯ್ಯನಗೌಡ್ರ ಶಿಶು ಅಭಿವೃದ್ಧಿ ಯೋಜನಾಧಿಕಾರಿ ಅಮಾನತ್ತುಗೊಂಡ) ಜಗಳೂರು ಇವರನ್ನು ಸೇವೆಯಲ್ಲಿ ಪುನರ್ ಸ್ಥಾಪಿಸುವ ಕುರಿತು–ಆದೇಶ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಮಮಇ 28 ಎಸ್‌ಜೆಡಿ 2008 ದಿ:25.01.2008
2. ಅಪರ ಪೋಲೀಸ್, ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಸಿಟಿಎಲ್–31/ಸಿಆರ್–9/2007 ದಿ: 05.08.2008
3. ಶ್ರೀಮತಿ ಸುನಂದಮ್ಮ ಬಸವನಗೌಡ ಅಯ್ಯನಗೌಡ,ರವರ ಮನವಿ ದಿ: 01.04.2008

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 25.01.2008 ರ ಆದೇಶದಲ್ಲಿ ಶ್ರೀಮತಿ ಸುನಂದಮ್ಮ ಬಸವನಗೌಡ ಅಯ್ಯನಗೌಡ್ರ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಜಗಳೂರು, ದಾವಣಗೆರೆ ಜಿಲ್ಲೆ ಇವರನ್ನು ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಅಪರ ಪೋಲೀಸ್, ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿ: 31.12.2007 ರ ಪತ್ರದಲ್ಲಿನ ಶಿಫಾರಸ್ಸುಗಳನ್ವಯ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿತ್ತು. ತದನಂತರ ಸದರಿಯವರು ದಿ: 01.04.2008 ರ ಮನವಿಯಲ್ಲಿ ತಮ್ಮನ್ನು ಸೇವೆಗೆ ಪುನರ್ ಸ್ಥಾಪಿಸುವಂತೆ ಕೋರಿದ್ದು, ಈ ಬಗ್ಗೆ ಸರ್ಕಾರವು ಲೋಕಾಯುಕ್ತರ ಅಭಿಪ್ರಾಯವನ್ನು ಕೇಳಲಾಗಿ ಮೇಲೆ ಓದಲಾದ (2) ರ ಅಪರ ಪೋಲೀಸ್, ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿ: 05.08.2008 ರ ಪತ್ರದಲ್ಲಿ ಸದರಿಯವರನ್ನು ಅಮಾನತ್ತಿನಿಂದ ಬಿಡುಗಡೆ ಮಾಡಿ, ಸೇವೆಗೆ ಪುನರ್ ಸ್ಥಾಪಿಸುವ ಕುರಿತು ಸರ್ಕಾರಕ್ಕೆ ಸೂಕ್ತವೆನಿಸುವ ಕ್ರಮವನ್ನು ತೆಗೆದುಕೊಳ್ಳಬಹುದೆಂದು ತಿಳಿಸಿರುತ್ತಾರೆ. ಶ್ರೀಮತಿ ಸುನಂದಮ್ಮ ಬಸವನಗೌಡ ಅಯ್ಯನಗೌಡ್ರ ಇವರನ್ನು ಅಮಾನತ್ತುಗೊಳಿಸಿ ಈಗಾಗಲೆ 8 ತಿಂಗಳುಗಳು ಸಂದಿವೆಯಾದ್ದರಿಂದ ಸದರಿಯವರ ಧಾರಣಾಧಿಕಾರವನ್ನು ಬೇರೆ ಸ್ಥಳಕ್ಕೆ ವರ್ಗಾಯಿಸಿ, ಸೂಕ್ತ ಸ್ಥಳನಿಯುಕ್ತಿ ನೀಡಿ, ಸೇವೆಗೆ ಪುನರ್ ಸ್ಥಾಪಿಸುವುದು ಸೂಕ್ತವೆಂದು ಸರ್ಕಾರವು ಭಾವಿಸಿ, ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖಾ ಸಚಿವರ ಒಪ್ಪಿಗೆ ಪಡೆದು, ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಮಮಇ 28 ಎಸ್‌ಜೆಡಿ 2008 (ಭಾಗ), ಬೆಂಗಳೂರು, ದಿನಾಂಕ: 12ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಶ್ರೀಮತಿ ಸುನಂದಮ್ಮ ಬಸವನಗೌಡ ಅಯ್ಯನಗೌಡ್ರ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಜಗಳೂರು ಇವರ ವಿರುದ್ಧದ ಲೋಕಾಯುಕ್ತ ತನಿಖೆ ಹಾಗೂ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು, ಇವರ ಅಮಾನತ್ತನ್ನು ಈ ತಕ್ಷಣದಿಂದಲೇ ಜಾರಿಗೆ ಬರುವಂತೆ ತೆರವುಗೊಳಿಸಿ, ಸೇವೆಗೆ ಪುನರ್ ಸ್ಥಾಪಿಸಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಹರಿಹರ, ದಾವಣಗೆರೆ ಜಿಲ್ಲೆ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1368

**ಆರ್.ಎಂ.ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ವಿಷಯ:** ಕರ್ನಾಟಕದಲ್ಲಿ ಬಾಲವಿಕಾಸ ಅಕಾಡೆಮಿ ಸ್ಥಾಪಿಸುವ ಬಗ್ಗೆ–ಆದೇಶ.

**ಓದಲಾಗಿದೆ:** ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ದಿ ಇಲಾಖೆ ಇವರ ಪತ್ರ ಸಂಖ್ಯೆ: ಮಮಅಇ:ಬಾವಿಅ:08–09 ದಿನಾಂಕ: 22.08.2008

**ಪ್ರಸ್ತಾವನೆ:**

ದಿನಾಂಕ: 17.07.2008 ರಂದು ಮಾನ್ಯ ಮುಖ್ಯಮಂತ್ರಿಯವರು 2008–09 ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಕ್ಕಳ ಸರ್ವತೋಮುಖ ಅಭಿವೃದ್ಧಿಗಾಗಿ ರಾಜ್ಯದಲ್ಲಿ ಬಾಲವಿಕಾಸ ಅಕಾಡೆಮಿಯನ್ನು ರಚಿಸುವುದಾಗಿ ಪ್ರಕಟಿಸಿರುತ್ತಾರೆ.

ಮೇಲೆ ಓದಲಾದ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಪತ್ರದಲ್ಲಿ ಮಕ್ಕಳಿಗೆ ಶಿಕ್ಷಣ ಸಾಹಿತ್ಯ, ಸಂಗೀತ ಕಲೆ ಹಾಗೂ ಮುಂತಾದ ವಿವಿಧ ಕ್ಷೇತ್ರಗಳಲ್ಲಿ ವಿಶೇಷ ಕಾಳಜಿ ವಹಿಸಿ ಮಕ್ಕಳಲ್ಲಿ ಹುದುಗಿರುವ ಪ್ರತಿಭೆಗಳನ್ನು ಬೆಳಕಿಗೆ ತರುವಲ್ಲಿ ಮತ್ತು ಸಮಾಜದಲ್ಲಿ ಮಕ್ಕಳಿಗಾಗಿ ಪ್ರಾಮುಖ್ಯತೆ ಒದಗಿಸುವ ನಿಟ್ಟಿನಲ್ಲಿ, ಅವರು ಎದುರಿಸುತ್ತಿರುವ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವಲ್ಲಿ ಮಕ್ಕಳಿಗಾಗಿ ಪ್ರತ್ಯೇಕವಾದ ಒಂದು ಅಕಾಡೆಮಿಯನ್ನು ಸ್ಥಾಪಿಸುವಂತೆ ಬಹಳ ದಿನಗಳಿಂದ ವಿವಿಧ ಮೂಲಗಳಿಂದ ಬೇಡಿಕೆಗಳು ಬಂದಿರುವುದೆಂದು ತಿಳಿಸಿರುತ್ತಾರೆ.

ಇದಲ್ಲದೆ, ಬಾಲ್ಯವಿವಾಹ ಹಾಗೂ ದೇವದಾಸಿ ಪದ್ಧತಿಗಳು ಸಮಾಜದ ಅನಿಷ್ಠ ಪದ್ಧತಿಗಳಾಗಿದ್ದು, ಬಾಲ್ಯ ವಿವಾಹ ಪದ್ಧತಿಯು ಈಗಲೂ ರಾಜ್ಯದ ವಿವಿಧ ಭಾಗಗಳಲ್ಲಿ ರೂಢಿಯಲ್ಲಿದ್ದು, ದೇವದಾಸಿ ಪದ್ಧತಿಯು ಬೇರೆ ಬೇರೆ ಹೆಸರಿನಲ್ಲಿ ಪ್ರಮುಖವಾಗಿ ಉತ್ತರ ಕರ್ನಾಟಕದ ಧಾರವಾಡ, ಬೆಳಗಾಂ, ಗೋಕಾಕ್, ಬಾಗಲಕೋಟೆ, ಬಿಜಾಪುರ ಹಾಗೂ ಇನ್ನಿತರ ಜಿಲ್ಲೆಗಳಲ್ಲಿ ಪ್ರಚಲಿತದಲ್ಲಿರುತ್ತದೆ. ಈ ಪದ್ಧತಿಗಳನ್ನು ನಿಷೇಧಿಸಿ ಮಕ್ಕಳ ಹಕ್ಕುಗಳನ್ನು ರಕ್ಷಿಸಲು ಪರಿಣಾಮಕಾರಿಯಾದ ಶಿಕ್ಷಣದ ಕಾರ್ಯಕ್ರಮದ ಮೂಲಕ ಮಕ್ಕಳ ಲೈಂಗಿಕ ಶೋಷಣೆಯ ಎಲ್ಲಾ ರೂಪಗಳನ್ನು ತಡೆಗಟ್ಟಬಹುದಾಗಿದೆ.

ಮಕ್ಕಳ ಆರೋಗ್ಯ, ರಕ್ಷಣೆ, ಪೋಷಣೆ ಮತ್ತು ಶಿಕ್ಷಣ ಕ್ಷೇತ್ರಗಳ ಬಗ್ಗೆ ಗಮನ ಹರಿಸಿ ಸರ್ವಾಂಗೀಣ ಅಭಿವೃದ್ಧಿಗಾಗಿ ನೂತನ ಆವಿಷ್ಕಾರಗಳು, ಸಂಶೋಧನೆಗಳು ಹಾಗೂ ವಿವಿಧ ತರಬೇತಿ ಕಾರ್ಯಕ್ರಮಗಳನ್ನು ರೂಪಿಸುವ ನಿಟ್ಟಿನಲ್ಲಿ ಮಕ್ಕಳಿಗಾಗಿ ಬಾಲವಿಕಾಸ ಅಕಾಡೆಮಿಯನ್ನು ಸ್ಥಾಪಿಸಬೇಕಾಗಿರುತ್ತದೆ ಹಾಗೂ ಮಕ್ಕಳ ಅಕಾಡೆಮಿಗಾಗಿ ಧಾರವಾಡದಲ್ಲಿ ಹೋರಾಟ ಪ್ರಾರಂಭವಾದದ್ದು ಹಾಗೂ ಎನ್.ಎಫ್.ಎಚ್.ಎಸ್ ಜನಗಣತಿ ಹಾಗೂ ಇತರೆ ಮೂಲಗಳಿಂದ ಕಂಡು ಬಂದ ಅಂಶಗಳನ್ವಯ ಮಕ್ಕಳ ಸ್ಥಿತಿಗತಿಗಳ ಸೂಚಕದಲ್ಲಿ ಉತ್ತರ ಕರ್ನಾಟಕದ ಭಾಗವು ಕೆಳಮಟ್ಟದಲ್ಲಿದ್ದು ಮತ್ತು ಕನ್ನಡದ ಹಿರಿಯ ಹಾಗೂ ಹಲವಾರು ಸಾಹಿತಿಗಳ ಆಶಯದಂತೆ ಈ ಅಕಾಡೆಮಿಯ ಕೇಂದ್ರ ಕಛೇರಿಯನ್ನು ಹುಬ್ಬಳ್ಳಿ–ಧಾರವಾಡದಲ್ಲಿ ಸ್ಥಾಪಿಸುವಂತೆ ಕೋರಿರುತ್ತಾರೆ.

ಬಾಲವಿಕಾಸ ಅಕಾಡೆಮಿಯ ಕಾರ್ಯನಿರ್ವಹಣೆಯ ರೂಪುರೇಷೆ ಅವಶ್ಯವಿರುವ ಸಿಬ್ಬಂದಿ ಮತ್ತು ವೆಚ್ಚದ ಕುರಿತು ಸಲ್ಲಿಸಿರುವ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗೆ ಸೂಚಿಸಿದಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ: ಮಮಇ 215 ಮಭಾಬ 2008, ಬೆಂಗಳೂರು ದಿನಾಂಕ 30ನೇ ಅಕ್ಟೋಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಮಕ್ಕಳಿಗೆ ಶಿಕ್ಷಣ, ಸಾಹಿತ್ಯ, ಕ್ರೀಡೆ, ಕಲೆ, ಸಾಂಸ್ಕೃತಿಕ ಮುಂತಾದ ಕ್ಷೇತ್ರಗಳಲ್ಲಿ ಮಕ್ಕಳ ಪ್ರತಿಭೆಗಳನ್ನು ಗುರುತಿಸುವ ಮತ್ತು ಅಂತಹ ಪ್ರತಿಭೆಯನ್ನು ಸಮಾಜಕ್ಕೆ ಪರಿಚಯಿಸಿ/ಬಿಂಬಿಸಲು ಹಾಗೂ ಮಕ್ಕಳ ಆರೋಗ್ಯ, ರಕ್ಷಣೆ, ಪೋಷಣೆ ಮತ್ತು ಶಿಕ್ಷಣ ಕ್ಷೇತ್ರಗಳ ಬಗ್ಗೆ ಗಮನಹರಿಸಿ ನೂತನ ಆವಿಷ್ಕಾರಗಳು, ಸಂಶೋಧನೆಗಳು ಹಾಗೂ ವಿವಿಧ ತರಬೇತಿ ಕಾರ್ಯಕ್ರಮಗಳನ್ನು ರೂಪಿಸುವ ನಿಟ್ಟಿನಲ್ಲಿ "ಮಕ್ಕಳಿಗಾಗಿ ಬಾಲವಿಕಾಸ ಅಕಾಡೆಮಿ" ರಚಿಸುವ ಹೊಸ ಯೋಜನೆಗೆ ಮಂಜೂರಾತಿ ನೀಡಲಾಗಿದೆ.

ಬಾಲವಿಕಾಸ ಅಕಾಡೆಮಿಯ ಕೇಂದ್ರ ಕಛೇರಿಯನ್ನು ಧಾರವಾಡದಲ್ಲಿ ಸ್ಥಾಪಿಸತಕ್ಕದ್ದು ಮತ್ತು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಬಾಲವಿಕಾಸ ಅಕ್ಯಾಡೆಮಿಯನ್ನು ಕರ್ನಾಟಕ ಸಂಘಗಳ ನೊಂದಣಿ ಅಧಿನಿಯಮ, 1960ರಡಿಯಲ್ಲಿ ನೊಂದಾಯಿಸಲು ಸಹ ಮಂಜೂರಾತಿ ನೀಡಲಾಗಿದೆ.

ಇದಕ್ಕೆ ಲಗತ್ತಿಸಿರುವ ಅನುಬಂಧ–I ಮತ್ತು ಅನುಬಂಧ–IIರಲ್ಲಿರುವಂತೆ ಬಾಲವಿಕಾಸ ಅಕಾಡೆಮಿಯ ರೂಪುರೇಷೆಗಳಿಗೆ ಮತ್ತು ಅವಶ್ಯವಿರುವ ಹುದ್ದೆಗಳಿಗೆ ಸಹ ಮಂಜೂರಾತಿಯನ್ನು ನೀಡಲಾಗಿದೆ. ಅನುಬಂಧ–IIರ 12 ಹುದ್ದೆಗಳಲ್ಲಿ 6 ಹುದ್ದೆಗಳನ್ನು ಮಾತ್ರ ನಿಗಧಿಪಡಿಸಿರುವ ಕ್ರಮವನ್ನು ಅನುಸರಿಸಿ ಬಾಹ್ಯಮೂಲದಿಂದ ತುಂಬಲು ಮಂಜೂರಾತಿ ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚ ರೂ.10.00ಲಕ್ಷ (ರೂಪಾಯಿ ಹತ್ತು ಲಕ್ಷಗಳು ಮಾತ್ರ) ಮೊತ್ತವನ್ನು ಸಾದಿಲ್‌ವಾರು ನಿಧಿ ಲೆಕ್ಕಶೀರ್ಷಿಕೆ 8000–00–242–0–00 ರಡಿಯಲ್ಲಿ ಮೊದಲಿಗೆ ಪ್ರಾರಂಭಿಸಿ ನಂತರ ಪೂರಕ ಅಂದಾಜು–II ರಡಿಯಲ್ಲಿ ಲೆಕ್ಕಶೀರ್ಷಿಕೆ 2235–02–102–31–015 (ಯೋಜನೆ) ರಡಿಯಲ್ಲಿ ಹೊಂದಾಣಿಕೆ ಮಾಡಿಕೊಳ್ಳತಕ್ಕದ್ದು. ಸದರಿ ರೂ.10.00ಲಕ್ಷ ಮೊತ್ತವನ್ನು ಆರ್ಥಿಕ ಇಲಾಖೆ ಪ್ರತ್ಯೇಕ ವಾಗಿ ಹೊರಡಿಸುವ ಆದೇಶದ ನಂತರ ಪಡೆಯಲು ಮಂಜೂರಾತಿ ನೀಡಲಾಗಿದೆ. ಇದಲ್ಲದೆ, ರೂ.20.00ಲಕ್ಷ (ರೂಪಾಯಿ ಇಪ್ಪತ್ತು ಲಕ್ಷ ಮಾತ್ರ) ಮೊತ್ತವನ್ನು ಪೂರಕ ಅಂದಾಜು– II ರಡಿಯಲ್ಲಿ ಒದಗಿಸಲಾಗುತ್ತದೆ.

ಈ ಆದೇಶವನ್ನು ಟಿಪ್ಪಣಿ ಸಂ:ಎಫ್‌ಡಿ 660 ಇಎಕ್ಸ್‌ಪಿ–3/2007 ದಿನಾಂಕ:22.10.2008ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ.ಶಿವಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ–1,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಅನುಬಂಧ –1**

**(ಸರ್ಕಾರಿ ಆದೇಶ ಸಂ:ಮಮಇ 215 ಮಭಾಬ 2008 ದಿನಾಂಕ:30.10.2008)**

**ಬಾಲವಿಕಾಸ ಅಕಾಡೆಮಿಯ ರೂಪುರೇಷೆಗಳು**

ಬಾಲವಿಕಾಸ ಅಕಾಡೆಮಿ, ಇನ್ನು ಮುಂದೆ "ಅಕಾಡೆಮಿ" ಎಂದು ಉಲ್ಲೇಖಿಸಲಾಗಿದ್ದು, ಅದರ ರಚನೆ, ಸದಸ್ಯರ ಕಾಲಾವಧಿ, ಸಿಬ್ಬಂದಿ, ಅಕಾಡೆಮಿಯ ಸಭೆ ಮತ್ತು ಕಾರ್ಯವ್ಯಾಪ್ತಿ, ಲೆಕ್ಕಪತ್ರ ಮತ್ತು ಪರಿಶೋಧನೆ, ವಾರ್ಷಿಕ ವರದಿ ಇತ್ಯಾದಿಯು ಈ ಕೆಳಗೆ ಸೂಚಿಸಿದಂತಿರುತ್ತದೆ:–

**I.ಅಕಾಡೆಮಿಯ ರಚನೆ:–**

ಅಕಾಡೆಮಿಯು ಈ ಕೆಳಗೆ ಸೂಚಿಸಿದ ಸದಸ್ಯರನ್ನು ಒಳಗೊಂಡಿರತಕ್ಕದ್ದು:–

**1. ಅಧ್ಯಕ್ಷರು:**

ರಾಜ್ಯ ಸರ್ಕಾರವು ಮಕ್ಕಳ ಕ್ಷೇತ್ರದಲ್ಲಿ ಅನುಭವವುಳ್ಳವರು ಹಾಗೂ ಮಕ್ಕಳ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿರುವಂತಹ ವ್ಯಕ್ತಿಯನ್ನು ಅಧ್ಯಕ್ಷರನ್ನಾಗಿ ನಾಮನಿರ್ದೇಶನ ಮಾಡತಕ್ಕದ್ದು ಮತ್ತು ಅವರ ಅಧಿಕಾರಾವಧಿಯು ಸರ್ಕಾರದ ಇಚ್ಚೆಗೊಳಪಟ್ಟು 3 ವರ್ಷಗಳಿಗೆ ಮೀರದಂತೆ ಸರ್ಕಾರವು ನಿರ್ಧಿಷ್ಟ ಪಡಬಹುದಾದಂತಹ ಅವಧಿಯವರೆಗೆ ಇರತಕ್ಕದ್ದು.

**2. ಸದಸ್ಯರು:**

ಅ)ಶೈಕ್ಷಣಿಕ/ಆಹಾರ/ಮನ:ಶಾಸ್ತ್ರ/ಸಾಹಿತ್ಯ ಕ್ಷೇತ್ರದಲ್ಲಿ ಪರಿಣಿತಿ ಹೊಂದಿರುವ ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತನಾಗಿರತಕ್ಕ ನಾಲ್ಕು ಸದಸ್ಯರನ್ನು ಒಳ ಗೊಂಡಿರತಕ್ಕದ್ದು.

ಆ)ಮೇಲೆ ಸೂಚಿಸಿದ ನಾಲ್ಕು ಸದಸ್ಯರಲ್ಲದೆ ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತನವಾಗಿರತಕ್ಕ ನಾಲ್ಕು ಅಧಿಕಾರೇತರ ಸದಸ್ಯರನ್ನು ಒಳಗೊಂಡಿರ ತಕ್ಕದ್ದು.

ಇ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ, ಪದನಿಮಿತ್ತ ಸದಸ್ಯರಾಗಿರುತ್ತಾರೆ.

ಈ)ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರು ಪದನಿಮಿತ್ತ ಸದಸ್ಯರಾಗಿರುತ್ತಾರೆ.

3. ಅಧಿಕಾರೇತರ ಸದಸ್ಯರ ಕಾಲಾವಧಿಯು ಸರ್ಕಾರದ ಇಚ್ಚೆಗೊಳಪಟ್ಟು 3 ವರ್ಷಗಳಿಗೆ ಮೀರದಂತೆ ಸರ್ಕಾರವು ನಿರ್ಧಿಷ್ಟ ಪಡಬಹುದಾದಂತಹ ಅವಧಿಯವರೆಗೆ ಇರತಕ್ಕದ್ದು.

**3. ಸಂಚಾಲಕರು:–** ಯೋಜನಾಧಿಕಾರಿಯು ಅಕಾಡೆಮಿ ಸಭೆಗಳ ಸಂಚಾಲಕರಾಗಿ ಸಹ ಕಾರ್ಯನಿರ್ವಹಿಸತಕ್ಕದ್ದು.

4. ಸರ್ಕಾರದಿಂದ ನಾಮನಿರ್ದೇಶನ ಮಾಡಿದ ಅಧ್ಯಕ್ಷರು ಅಥವಾ ಸದಸ್ಯರ ರಾಜೀನಾಮೆಯಿಂದಾಗಿ, ನಿಧನದಿಂದಾಗಿ ಅಥವಾ ಇತರೆ ಯಾವುದೇ ಕಾನೂನು ಅಡಚಣೆಯಿಂದಾಗಿ ತೆರವಾದರೆ ಆ ಸ್ಥಾನಕ್ಕೆ ರಾಜ್ಯ ಸರ್ಕಾರವು ಇತರ ವ್ಯಕ್ತಿಗಳನ್ನು ನಾಮನಿರ್ದೇಶನ ಮಾಡತಕ್ಕದ್ದು:–

ಪರಂತು, ಅಧ್ಯಕ್ಷರ ಸ್ಥಾನದ ತೆರವಿನಿಂದಾಗಿ, ಉಂಟಾಗುವ ಖಾಲಿ ಸ್ಥಾನಕ್ಕೆ ತಾತ್ಕಾಲಿಕವಾಗಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸರ್ಕಾರದ ಕಾರ್ಯದರ್ಶಿ ಇವರನ್ನು ನೇಮಿಸಲು ಸರ್ಕಾರವು ಅಧಿಕಾರ ಹೊಂದಿರುತ್ತದೆ.

**II ಅಕಾಡೆಮಿಯ ಸಭೆ ನೋಟೀಸ್ ಮತ್ತು ಕಾರ್ಯಸೂಚಿ:–**

(1) ಅಕಾಡೆಮಿ ಸದಸ್ಯರ ಒಟ್ಟು ಸಂಖ್ಯೆಯ ಮೂರನೇ ಎರಡರಷ್ಟು ಭಾಗವು ಸಭೆಯ ಕೋರಂ ಆಗಿರತಕ್ಕದ್ದು. ಸಭೆಗೆ ಗೊತ್ತುಪಡಿಸಿದ ಸಮಯದಲ್ಲಿ ಕೋರಂ ಇಲ್ಲದಿದ್ದರೆ ಅಧ್ಯಕ್ಷರು ಮೂವತ್ತು ನಿಮಿಷ ಸಭೆಯನ್ನು ಮುಂದೂಡ ತಕ್ಕದ್ದು ಮತ್ತು ಅಂಥ ಅವಧಿಯೊಳಗೂ ಕೋರಂ ಇಲ್ಲದಿದ್ದ ಸಂದರ್ಭದಲ್ಲಿ, ಅಧ್ಯಕ್ಷರು

ನಿರ್ಧರಿಸಬಹುದಾದಂಥ ತರುವಾಯದ ದಿನಾಂಕಕ್ಕೆ ಸಭೆಯನ್ನು ಮುಂದೂಡತಕ್ಕದ್ದು. ಮುಂದೂಡಲಾದ ಸಭೆಯಲ್ಲೂ ಕೋರಂ ಇಲ್ಲದಿದ್ದರೆ, ಹಾಗೆ ಮುಂದೂಡಲಾದ ಸಭೆಗೆ ಕೋರಂನ ಅವಶ್ಯಕತೆಯಿರತಕ್ಕದ್ದಲ್ಲ.

(2) ಸಭೆಯ ನೋಟೀಸನ್ನು, ಸಭೆಯ ದಿನಾಂಕಕ್ಕೆ ಕಡೇ ಪಕ್ಷ ಹತ್ತು ದಿನ ಗಳಿಗಿಂತ ಮುಂಚೆ ಸದಸ್ಯರಿಗೆ ಅಂಚೆ ಮೂಲಕ ಅಥವಾ ಖುದ್ದಾಗಿ ಕಳುಹಿಸತಕ್ಕದ್ದು.

(3) ಒಂದು ನಿರ್ಧಿಷ್ಟ ವಿಷಯವನ್ನು ಸಭೆಗಳಲ್ಲಿ ಪರಿಣಾಮಕಾರಿಯಾಗಿ ಮತ್ತು ಸಾಕಷ್ಟು ಪರಿಗಣಿಸುವುದು ಸಾಧ್ಯವಾಗುವುದಿಲ್ಲವೆಂದು ಅಥವಾ ಅದು ತುರ್ತು ಸ್ವರೂಪದ್ದೆಂದು ಅಧ್ಯಕ್ಷರು ಪರಿಗಣಿಸಿದರೆ, ಅಧ್ಯಕ್ಷರು ಯಾರೇ ಸದಸ್ಯ/ಸದಸ್ಯರುಗಳ ಲಿಖಿತ ಮನವಿಯ ಮೇರೆಗೆ ಆ ವಿಷಯ ವನ್ನು ಪರಿಶೀಲಿಸಲು ಅಕಾಡೆಮಿ ವಿಶೇಷ ಸಭೆಯನ್ನು ಕರೆಯಬಹುದು. ಆದಾಗ್ಯೂ, ಅಂತಹ ಸಭೆಯ ನೋಟೀಸನ್ನು ಸದಸ್ಯರಿಗೆ ಕಡೇ ಪಕ್ಷ ಮೂರು ದಿನಗಳಿಗಿಂತ ಮುಂಚಿತವಾಗಿ ಕಳುಹಿಸತಕ್ಕದ್ದು.

(4) ಸಂಚಾಲಕರು ಆಯೋಗದ ಸಭೆಗಳಿಗೆ ಕಾರ್ಯಸೂಚಿಯನ್ನು ಸಿದ್ದಪಡಿಸ ತಕ್ಕದ್ದು. ಸದಸ್ಯರು ತರುವಾಯದ ಸಭೆಯ ಕಾರ್ಯಸೂಚಿಯಲ್ಲಿ ಯಾವುದೇ ನಿರ್ಧಿಷ್ಟ ವಿಷಯವನ್ನು ಸೇರಿಸುವಂತೆ ಸಲಹೆ ನೀಡಬಹುದು. ಕಾರ್ಯಸೂಚಿಗೆ ಸಂಬಂಧಪಟ್ಟ ಟಿಪ್ಪಣಿಗಳನ್ನು ಅಕಾಡೆಮಿಯ ಕಛೇರಿಯು ಸಿದ್ದಪಡಿಸುವುದು.

(5) ಸಾಮಾನ್ಯವಾಗಿ, ಕಾರ್ಯಸೂಚಿಯ ಮೇಲಿನ ಟಿಪ್ಪಣಿಗಳೊಂದಿಗೆ ಸಭೆಯ ನೋಟೀಸನ್ನು ಮತ್ತು ಈ ಹಿಂದಿನ ಸಭೆಯ ನಡವಳಿಗಳ ಪ್ರತಿಗಳನ್ನು ಹತ್ತು ದಿನಗಳಿಗಿಂತ ಮುಂಚಿತವಾಗಿ ಸದಸ್ಯರಿಗೆ ಕಳುಹಿಸಿಕೊಡತಕ್ಕದ್ದು.

**<u>III.ಯೋಜನಾಧಿಕಾರಿ:</u>**

(1) ಸರ್ಕಾರದಿಂದ ನೇಮಕ ಮಾಡಲಾದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಜಂಟಿ ನಿರ್ದೇಶಕರ ಶ್ರೇಣಿಯ ಅಧಿಕಾರಿ ಅಥವಾ ತತ್ಸಮಾನ ವೇತನ ಶ್ರೇಣಿಯ ಇತರೆ ಸೇವೆಗಳ ಅಧಿಕಾರಿಯು ಅಕಾಡೆಮಿಯ ಯೋಜನಾಧಿಕಾರಿಯಾಗಿರುತ್ತಾರೆ. ಯೋಜನಾಧಿಕಾರಿಯು ಅಕಾಡೆಮಿಯ ಮುಖ್ಯಕಾರ್ಯನಿರ್ವಾಹಕ ಅಧಿಕಾರಿ ಯಾಗಿರತಕ್ಕದ್ದು ಹಾಗೂ ಅಕಾಡೆಮಿಯ ಅನುದಾನವನ್ನು ನಿರ್ವಹಿಸತಕ್ಕದ್ದು ಮತ್ತು ಲೆಕ್ಕಪತ್ರಗಳನ್ನು ನಿರ್ವಹಿಸುವಂತೆ ಮಾಡತಕ್ಕದ್ದು.

(2) ಯೋಜನಾಧಿಕಾರಿಯು ಸರ್ಕಾರವು ಕಾಲಕಾಲಕ್ಕೆ ನಿರ್ಧರಿಸಬಹುದಾದಂತ ವೇತನ ಮತ್ತು ಇತರ ಭತ್ಯೆಗಳನ್ನು ಸ್ವೀಕರಿಸತಕ್ಕದ್ದು.

(3) ಯೋಜನಾಧಿಕಾರಿಯವರ ಕರ್ತವ್ಯಗಳು ಅಕಾಡೆಮಿಯ ನಿಯಂತ್ರಣಕ್ಕೊಳಪಟ್ಟು ಈ ಮುಂದಿನಂತಿರತಕ್ಕದ್ದು:–

ಅ) ಅಕಾಡೆಮಿಯ ಪರವಾಗಿ ಅಧಿಕೃತ ವ್ಯವಹಾರ ನಡೆಸುವುದು.

ಆ) ಅಕಾಡೆಮಿಯ ಮತ್ತು ಅಕ್ಯಾಡೆಮಿಯು ನೇಮಿಸಿದ ಎಲ್ಲಾ ಸಮಿತಿ ಸಭೆಯನ್ನು ಕರೆಯುವ ನೋಟೀಸನ್ನು ಹೊರಡಿಸುವುದು.

ಇ) ಅಕಾಡೆಮಿಯು ಅನುಮೋದಿಸಿದ ಕಾರ್ಯಕ್ರಮಗಳನ್ನು ನಿಯಮಾನುಸಾರ ಅನುಷ್ಠಾನಗೊಳಿಸುವುದು.

ಈ) ಅಕಾಡೆಮಿ ಪರವಾಗಿ ಒಪ್ಪಂದಗಳಿಗೆ ಸಹಿ ಹಾಕುವುದು.

ಉ) ನಿಯಮಗಳಿಗನುಸಾರವಾಗಿ ವೆಚ್ಚವನ್ನು ಮಾಡುವುದು.

**<u>IV. ಅಕಾಡೆಮಿಯ ಸಿಬ್ಬಂದಿ:</u>**

1) ಅಕಾಡೆಮಿಯ ಕಾರ್ಯವನ್ನು ದಕ್ಷತೆಯಿಂದ ನಿರ್ವಹಿಸಲು ಈ ಆದೇಶದಲ್ಲಿ ಸೃಜಿಸಲಾಗಿರುವ ಹುದ್ದೆಗಳನ್ನು ಹೊಂದಿರತಕ್ಕದ್ದು.

2) ಯೋಜನಾಧಿಕಾರಿ ಹಾಗೂ ಸಿಬ್ಬಂದಿಯ ವೇತನ, ಭತ್ಯೆ ಮತ್ತು ಅಕಾಡೆಮಿಯ ಆಡಳಿತಾತ್ಮಕ ವೆಚ್ಚವನ್ನು ಸರ್ಕಾರವು ಮಂಜೂರು ಮಾಡುವ ಅನುದಾನದಲ್ಲಿ ಭರಿಸತಕ್ಕದ್ದು.

**<u>V.ಅಕಾಡೆಮಿಯ ಪ್ರಕಾರ್ಯಗಳು:–</u>**

ಅಕಾಡೆಮಿಯು ಈ ಕೆಳಗಿನ ಎಲ್ಲಾ ಪ್ರಕಾರ್ಯವನ್ನು ನೆರವೇರಿಸತಕ್ಕದ್ದು:–

- ಅಕಾಡೆಮಿಯ ಮೂಲ ಉದ್ದೇಶ ಮಕ್ಕಳ ಸರ್ವತೋಮುಖ ಅಭಿವೃದ್ದಿಗಾಗಿ ವಿಶೇಷ ಕಾರ್ಯಕ್ರಮಗಳನ್ನು ರೂಪಿಸುವುದು ಮುಖ್ಯವಾಗಿ ಆರ್ಥಿಕವಾಗಿ ಮತ್ತು ಸಾಮಾಜಿಕ ವಾಗಿ ಹಿಂದುಳಿದ ಮಕ್ಕಳನ್ನು ಕೇಂದ್ರವಾಗಿಟ್ಟುಕೊಂಡು ಕಾರ್ಯಕ್ರಮಗಳನ್ನು ರೂಪಿಸುವುದು.

- ಗ್ರಾಮೀಣ ಮಕ್ಕಳ ಮನೋವಿಕಾಸಗೊಳಿಸುವ ಮತ್ತು ಆತ್ಮಸ್ಥೈರ್ಯ ತುಂಬುವ ರಚನಾತ್ಮಕ ಕಾರ್ಯಕ್ರಮಗಳನ್ನು ರೂಪಿಸಿ ಕಾರ್ಯಗತಗೊಳಿಸುವುದು.
- ಡಾ:ಶಿವರಾಮಕಾರಂತರ ಮಕ್ಕಳ ಸರ್ವಾಂಗೀಣ ಅಭಿವೃದ್ಧಿಗೆ ಪ್ರಯತ್ನಿಸಿದ ಪ್ರಯೋಗಗಳನ್ನು ಅನುಷ್ಠಾನಗೊಳಿಸುವುದು.
- ಪ್ರತಿ ಹಳ್ಳಿಯಲ್ಲಿ ಮಕ್ಕಳಿಗಾಗಿ ವಿಜ್ಞಾನ, ಸಾಹಿತ್ಯ, ಸಂಸ್ಕೃತಿ, ಕಲೆಗಳ ಚಟುವಟಿಕೆಗಳ ಕೇಂದ್ರವಾಗಿ ಹೊಂದಿರುವ ``ಬಾಲಜ್ಞಾನ ವಿಕಾಸ ಕೇಂದ್ರ`` ನಿರ್ಮಿಸಿ ಮಕ್ಕಳ ಪ್ರತಿಭೆ ಅರಳಿಸುವ ನಿರಂತರ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು.
- ಮಕ್ಕಳ ಮನಸ್ಸು ಅರಳಿಸುವ ಮೌಲ್ಯಯುಕ್ತ ಮಕ್ಕಳ ಸಾಹಿತ್ಯ ರಚನೆಯಾಗುವಂತೆ ಮತ್ತು ಅದು ಮಕ್ಕಳ ಕೈಗೆ ತಲುಪುವಂತೆ ಮಾಡುವುದು.
- ಮಗುವು ಹುಟ್ಟಿದಾಗಿನಿಂದ ಹರೆಯದವರೆಗೆ ಮಗುವಿನ ದೈಹಿಕ, ಬೌದ್ಧಿಕ, ಸಾಮಾಜಿಕ ಮತ್ತು ವ್ಯಕ್ತಿತ್ವ ಬೆಳವಣಿಗೆಗಾಗಿ ಶಿಕ್ಷಣ, ಆರೋಗ್ಯ, ಪೌಷ್ಟಿಕತೆ, ಮನೋವಿಜ್ಞಾನ ಹಾಗೂ ಮಾಹಿತಿ ತಂತ್ರಜ್ಞಾನ ಕ್ಷೇತ್ರಗಳಲ್ಲಿ ಹೆಚ್ಚಿನ ಅಭಿವೃದ್ಧಿ ಗೊಳಿಸಿ ರಾಜ್ಯದಲ್ಲಿರುವ ಮಕ್ಕಳ ಸ್ಥಿತಿಗತಿಗಳನ್ನು ಉತ್ತಮಗೊಳಿಸುವುದು.
- ಮಕ್ಕಳ ಮೇಲಾಗುತ್ತಿರುವ ಎಲ್ಲಾ ರೀತಿಯ ಶೋಷಣೆಗಳನ್ನು ತಡೆಗಟ್ಟಲು ಅಂತರ ಜಿಲ್ಲಾ ಮತ್ತು ಅಂತರ ರಾಜ್ಯ ಅಂತರ್ ಜಾಲಗಳ ಸಂಪೂರ್ಣ ಬಳಕೆ ಮಾಡುವ ಮೂಲಕ ಮಕ್ಕಳಿಗೆ ಎಲ್ಲಾ ವಿಧದ ಶೋಷಣೆಯ ವಿರುದ್ಧ ರಕ್ಷಣೆ ನೀಡುವ ಕಾರ್ಯಕ್ರಮಗಳನ್ನು ರೂಪಿಸುವುದು.
- ಮಕ್ಕಳ ಕ್ಷೇತ್ರದಲ್ಲಿ ನೂತನ ಅವಿಷ್ಕಾರಗಳು, ಸಂಶೋಧನೆಗಳು ಹಾಗೂ ವಿವಿಧ ತರಬೇತಿ ಕಾರ್ಯಕ್ರಮಗಳನ್ನು ರೂಪಿಸುವುದು.
- ಪರಿಣಾಮಕಾರಿಯಾದ ಶಿಕ್ಷಣ ಕಾರ್ಯಕ್ರಮದ ಮೂಲಕ ದುಡಿಯುವ ಮಕ್ಕಳ ಪುನರ್ವಸತಿಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವುದು.

**VI. ಅಕಾಡೆಮಿಯ ಸಮಿತಿಗಳು:**

1) ಅಕಾಡೆಮಿಯು ಕಾಲಕಾಲಕ್ಕೆ ಕೈಗೊಳ್ಳಬಹುದಾದಂತಹ ವಿಶೇಷ ವಿಷಯಗಳ ಬಗ್ಗೆ ವ್ಯವಹರಿಸುವುದಕ್ಕೆ ಅಗತ್ಯವಾಗಬಹುದಾದಂತಹ ಉಪಸಮಿತಿಗಳನ್ನು ನೇಮಕ ಮಾಡಬಹುದು.
2) ಮೇಲೆ ಸೂಚಿಸಿದಂತೆ ಉಪಸಮಿತಿಗೆ ನೇಮಿಸಲಾದ ಯಾವುದೇ ಸರ್ಕಾರೇತರ ಸದಸ್ಯರು ಅಥವಾ ಸರ್ಕಾರೇತರ ಸಂಸ್ಥೆಗಳ ಪ್ರತಿನಿಧಿಗಳನ್ನು ಸಹಸದಸ್ಯರಾಗಿ ತೆಗೆದುಕೊಳ್ಳಲು ಅಕಾಡೆಮಿಯು ಹಕ್ಕನ್ನು ಹೊಂದಿದ್ದು, ಈ ರೀತಿ ನೇಮಕಾತಿಯಾದ ಸಹಸದಸ್ಯರು ಮತ ಚಲಾವಣೆ ಹಕ್ಕನ್ನು ಹೊರತುಪಡಿಸಿ ಅಕಾಡೆಮಿಯ ಸಭೆಗಳಲ್ಲಿ ಪಾಲ್ಗೊಳ್ಳಲು ಹಕ್ಕನ್ನು ಹೊಂದಿರುತ್ತಾರೆ.
3) ಈ ರೀತಿ ಅಕಾಡೆಮಿಯಿಂದ ನೇಮಕಾತಿಯಾದ ಸಹಸದಸ್ಯರು ನಿಗಧಿಪಡಿಸಿದ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

**VII. ಅಕಾಡೆಮಿಯ ಕೇಂದ್ರ ಕಛೇರಿ:–** ಅಕಾಡೆಮಿಯ ಕೇಂದ್ರ ಕಛೇರಿಯು ಧಾರವಾಡದಲ್ಲಿರುತ್ತದೆ.

VIII. **ಹಣಕಾಸು ಲೆಕ್ಕಪತ್ರ ಮತ್ತು ಲೆಕ್ಕಪರಿಶೋಧನೆ:–**

(1) ಅಕಾಡೆಮಿಯು ಮುಂದಿನ ಏಪ್ರಿಲ್ ತಿಂಗಳ ಮೊದಲ ದಿನದಂದು ಪ್ರಾರಂಭವಾ ಗುವ ಹಣಕಾಸು ವರ್ಷಕ್ಕಾಗಿ ಅದರ ಆದಾಯ ಮತ್ತು ವೆಚ್ಚಗಳ ಆಯವ್ಯಯ ಅಂದಾಜನ್ನು ನಿಯಮಿಸಬಹುದಾದ ಅಂಥ ದಿನಾಂಕಕ್ಕೆ ಮೊದಲು ಮತ್ತು ಅಂಥ ನಮೂನೆಯಲ್ಲಿ ಪ್ರತಿ ವರ್ಷ ತಯಾರಿಸತಕ್ಕದ್ದು ಮತ್ತು ಅದನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

(2) ಸರ್ಕಾರವು ಈ ಬಗ್ಗೆ ಕಾನೂನಿಗನುಸಾರವಾಗಿ ರಾಜ್ಯ ವಿಧಾನಮಂಡಲವು ಸೂಕ್ತ ಧನವಿಯೋಗ ಮಾಡಿದ ನಂತರ, ಅಕಾಡೆಮಿಯ ಉದ್ದೇಶಗಳಿಗಾಗಿ ಬಳಸುವುದಕ್ಕಾಗಿ ಸರ್ಕಾರವು ತಾವು ಸೂಕ್ತವೆಂದು ಭಾವಿಸಬಹುದಾದಂಥ ಹಣದ ಮೊತ್ತಗಳನ್ನು ಅನುದಾನಗಳ ರೂಪದಲ್ಲಿ ಅಕಾಡೆಮಿಗೆ ಸಂದಾಯ ಮಾಡತಕ್ಕದ್ದು.

(3) ಅಕಾಡೆಮಿಯ ಕರ್ತವ್ಯಗಳ ನಿರ್ವಹಣೆಗಾಗಿ ಅನುದಾನದಿಂದ ಅದು ಸೂಕ್ತವೆಂದು ಭಾವಿಸಬಹುದಾದ ಅಂಥ ಮೊತ್ತವನ್ನು ಬಳಸಬಹುದು.

(4) ಪ್ರತಿಯೊಂದು ಹಣಕಾಸು ಬಡ್ಜಟ್ ಅನುದಾನಗಳ ಸಂಬಂಧದಲ್ಲಿ ಮಾಡಿದ ವೆಚ್ಚದ ಲೆಕ್ಕಗಳ ವಿವರ ಪತ್ರವನ್ನು ಮತ್ತು ಅಕಾಡೆಮಿಯ ಎಲ್ಲಾ ಲೆಕ್ಕಪತ್ರ ಗಳನ್ನು ಕರ್ನಾಟಕ ಆರ್ಥಿಕ ಸಂಹಿತೆಗನುಸಾರವಾಗಿ ಮತ್ತು ಕಾಲಕಾಲಕ್ಕೆ ಸರ್ಕಾರವು ಹೊರಡಿಸುವ ಸೂಚನೆಗಳಿಗನುಸಾರವಾಗಿ ನಿರ್ವಹಿಸತಕ್ಕದ್ದು.

(5) ಅಕಾಡೆಮಿಯ ವಾರ್ಷಿಕ ಹಣಕಾಸು ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನಾ ವರದಿಗಳನ್ನು ಕರ್ನಾಟಕದ ಮಹಾಲೇಖಪಾಲರಿಗೆ ಸಲ್ಲಿಸತಕ್ಕದ್ದು.

(6) ಅಕಾಡೆಮಿಯು ಸರ್ಕಾರದ ಪೂರ್ವಾನುಮೋದನೆ ಪಡೆದು ಒಬ್ಬ ಚಾರ್ಟರ್ಡ್ ಅಕೌಂಟೆಂಟ್‌ರನ್ನು ಲೆಕ್ಕಪರಿಶೋಧಕರನ್ನಾಗಿ ನೇಮಕ ಮಾಡಿಕೊಳ್ಳತಕ್ಕದ್ದು ಮತ್ತು ಅಕಾಡೆಮಿಯು ನಿರ್ಧರಿಸಬಹುದಾದಷ್ಟು ಲೆಕ್ಕಪರಿಶೋಧನಾ ವೆಚ್ಚಗಳನ್ನು ಸಂದಾಯ ಮಾಡತಕ್ಕದ್ದು.

(7) ಅಕಾಡೆಮಿಯು ಹಿಂದಿನ ವರ್ಷದ ಅವಧಿಯಲ್ಲಿ ಕೈಗೊಂಡ ತನ್ನ ಕಾರ್ಯಚಟುವಟಿಕೆಗಳು ಮತ್ತು ಕಾರ್ಯಪ್ರಗತಿಯ ಲೆಕ್ಕಪ್ರತಗಳ ಪೂರ್ಣ ವಿವರಗಳನ್ನು ನೀಡಿ ಆ ಹಣಕಾಸು ವರ್ಷವು ಮುಕ್ತಾಯವಾದ ದಿನಾಂಕದಿಂದ ಮೂರು ತಿಂಗಳುಗಳೊಳಗೆ ಪ್ರಪತ್ರದಲ್ಲಿ ಒಂದು ವಾರ್ಷಿಕ ವರದಿಯನ್ನು ಸಿದ್ದಪಡಿಸತಕ್ಕದ್ದು ಮತ್ತು ಅದನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

**ಪ್ರಪತ್ರ**

**ವಾರ್ಷಿಕ ವರದಿ**

**ಕರ್ನಾಟಕ ಬಾಲವಿಕಾಸ ಅಕಾಡೆಮಿ**

1. ಅಧ್ಯಕ್ಷರು ಮತ್ತು ಸದಸ್ಯರ ವಿವರಗಳು.
2. ಅಕಾಡೆಮಿಯ ಪ್ರಕಾರ್ಯಗಳು
3. ಅಕಾಡೆಮಿಯ ಅಧಿಕಾರಗಳು
4. ಹಿಂದಿನ ವರ್ಷದ ಅವಧಿಯಲ್ಲಿ ಕೈಗೊಂಡ ಕಾರ್ಯಚಟುವಟಿಕೆಗಳು/ಕಾರ್ಯಕ್ರಮಗಳು
5. ಪರಿಶೋಧಿತ ಲೆಕ್ಕಪ್ರತಗಳು.

ಅಕಾಡೆಮಿಯಿಂದ ಹೊರಹೊಮ್ಮುವ ಮಾರ್ಗಸೂಚಿ/ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ಜಿಲ್ಲಾಮಟ್ಟದಲ್ಲಿ ಸಂಬಂಧಪಟ್ಟ ಇಲಾಖೆಗಳನ್ನು ಸದಸ್ಯರನ್ನಾಗಿ ಮಾಡಿ CEO ರವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಿ ಸಮಿತಿಯ ಮೂಲಕ ಕಾರ್ಯರೂಪಕ್ಕೆ ತರಬಹುದಾಗಿರುತ್ತದೆ. ಸದರಿ ಸಮಿತಿ ಯನ್ನು ತಾಲ್ಲೂಕು ಮಟ್ಟದಲ್ಲಿ ಕಾರ್ಯನಿರ್ವಹಣಾಧಿಕಾರಿ (Executive Officer) ಗಳ ಅಧ್ಯಕ್ಷತೆ ಯಲ್ಲಿ ರಚಿಸಬೇಕಾಗಿರುತ್ತದೆ.

ಜಿಲ್ಲಾಮಟ್ಟದಲ್ಲಿ ಸಮಿತಿಯನ್ನು ರಚಿಸಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಉಪನಿರ್ದೇಶಕರನ್ನು ಸಂಯೋಜನಾಧಿಕಾರಿಗಳನ್ನಾಗಿ ತಾಲ್ಲೂಕು ಮಟ್ಟದಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳನ್ನು ತಾಲ್ಲೂಕು ಸಂಚಾಲಕರನ್ನಾಗಿ ನಿಯುಕ್ತಿಗೊಳಿಸಬಹುದಾಗಿರುತ್ತದೆ.

ಪರ್ಯಾಯವಾಗಿ ಅಕಾಡೆಮಿಯ ಕಾರ್ಯಚಟುವಟಿಕೆಗಳನ್ನು ಸ್ವಯಂಕೃತವಾಗಿ ಅನುಷ್ಠಾನಗೊಳಿ ಸುವ ಬದಲು ಅಕಾಡೆಮಿಯು ಕಾಲಕಾಲಕ್ಕೆ ಯೋಜಿಸುವಂತಹ ಕಾರ್ಯಚಟುವಟಿಕೆಗಳ ಮತ್ತು ಯೋಜನೆಗಳ ಬಗ್ಗೆ ಬಾಹ್ಯಮೂಲಗಳ ಪರಿಣಿತಿ ಹೊಂದಿರುವ ಸಂಸ್ಥೆಗಳಿಂದ ಸೇವೆಗಳನ್ನು ನಿಗದಿತ ಸೇವಾ ಶುಲ್ಕಗಳೊಡನೆ ನಿಯಮಾನುಸಾರ ಪಡೆದುಕೊಂಡು ಅನುಷ್ಠಾನಗೊಳಿಸಬಹುದಾಗಿರುತ್ತದೆ.

**ವಿ.ಶಿವಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ–1,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಅನುಬಂಧ–II**

**ಸರ್ಕಾರಿ ಆದೇಶ ಸಂಖ್ಯೆ: ಮಮಇ 215 ಮಭಾಬ 2008, ಬೆಂಗಳೂರು ದಿನಾಂಕ:30.10.2008**

**ಬಾಲವಿಕಾಸ ಅಕಾಡೆಮಿ ಸ್ಥಾಪಿಸಲು ಮಂಜೂರಾಗಿರುವ ಹುದ್ದೆಗಳ ವಿವರ**

| ಕ್ರ ಸಂ | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ |
|---|---|---|---|
| 1 | ಯೋಜನಾಧಿಕಾರಿ (ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಜಂಟಿ ನಿರ್ದೇಶಕರು ಅಥವಾ ತತ್ಸಮಾನ ಇತರ ಸೇವೆಗಳ ಅಧಿಕಾರಿಗಳ ನಿಯೋಜನೆ ಮೇರೆಗೆ) | 01 | 20025-28275 |
| 2 | ಯೋಜನಾಧಿಕಾರಿಯವರ ಆಪ್ತ ಸಹಾಯಕರು | 01 | 7275-13350 |
| 3 | ಅಧ್ಯಕ್ಷರ ಆಪ್ತ ಸಹಾಯಕರು | 01 | 7275-13350 |
| 4 | ಆರ್ಥಿಕ ಸಲಹೆಗಾರರು (ರಾಜ್ಯಲೆಕ್ಕಪತ್ರ ಇಲಾಖೆಯಿಂದ ನಿಯೋಜನೆ ಮೇರೆಗೆ) | 01 | 14050-25050 |
| 5 | ಅಧೀಕ್ಷಕರು (ಆಡಳಿತ) | 01 | 11400-21600 |

| ಕ್ರ ಸಂ | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ |
|---|---|---|---|
| 6 | ಲೆಕ್ಕಾಧೀಕ್ಷಕರು | 01 | 10000-18150 |
| 7 | ದ್ವಿತೀಯ ದರ್ಜೆ ಸಹಾಯಕರು | 01 | 5800-10500 |
| 8 | ಶೀಘ್ರಲಿಪಿಗಾರರು | 01 | 7275-13350 |
| 9 | ಪಥಮ ದರ್ಜೆ ಸಹಾಯಕರು (ಗಣಕಯಂತ್ರದ ಪರಿಣಿತಿ ಹೊಂದಿರುವವರು) | 01 | 7275-13350 |
| 10 | ವಾಹನ ಚಾಲಕರು | 01 | 5800-10500 |
| 11 | ಗ್ರೂಪ್ "ಡಿ" ನೌಕರರು | 01 | 4800-7275 |

**ವಿ.ಶಿವಕುಮಾರ್**
ಪಿ.ಆರ್. 1537 ಸರ್ಕಾರದ ಅಧೀನ ಕಾರ್ಯದರ್ಶಿ–1,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ವಿಷಯ:** ಶ್ರೀ ಮಲ್ಲಿಕಾರ್ಜುನ ಆರ್. ರೆಡ್ಡಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಇಂಡಿ, ಬಿಜಾಪುರ ಜಿಲ್ಲೆ ಇವರ ವಿರುದ್ಧ ದಾಖಲಾದ ಲಂಚ ಪ್ರಕರಣದಲ್ಲಿ ಅಮಾನತ್ತುಗೊಂಡ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸಿ ಆದೇಶಿಸುವ ಬಗ್ಗೆ

**ಓದಲಾಗಿದೆ:**
1. ಕರ್ನಾಟಕ ಲೋಕಾಯುಕ್ತರ ಪತ್ರ ಸಂಖ್ಯೆ: ಎಲ್ಒಕೆ/ಐಎನ್ವಿ(ಜಿ)/ಸಿಟಿಎ–01/ಸಿಆರ್/06/2000 ದಿ: 30.09.2000.
2. ಸರ್ಕಾರದ ಆದೇಶ ಸಂಖ್ಯೆ: ಮಮಇ 258 ಎಸ್‌ಜೆಡಿ 2000 ದಿ: 08.11.2000 ಅಮಾನತ್ತುಗೊಂಡಿರುವ ಆದೇಶ)
3. ಸರ್ಕಾರದ ಆದೇಶ ಸಂಖ್ಯೆ: ಮಮಇ 258 ಎಸ್‌ಜೆಡಿ 2000 ದಿ: 27.4.2001
4. ಕರ್ನಾಟಕ ಲೋಕಾಯುಕ್ತರ ಪತ್ರ ಸಂಖ್ಯೆ: ಎಲ್ಒಕೆ/ಐಎನ್ವಿ(ಜಿ)–ಎಲ್ 41 ಸಿಆರ್–06/2000 ಬಿಜೆಪಿ ದಿ: 07.04.2001.
5. ಸರ್ಕಾರದ ಆದೇಶ ಸಂಖ್ಯೆ:ಮಮಇ 258 ಎಸ್‌ಜೆಡಿ 2000 ದಿ:27.9.2001
6. ಮಾನ್ಯ ಜಿಲ್ಲಾ ವಿಶೇಷ ಸತ್ರ ನ್ಯಾಯಾಲಯ ಬಿಜಾಪುರ ರವರ ತೀರ್ಪು ದಿ:8.4..05
7. ಸಾರ್ವಜನಿಕ ಅಭಿಯೋಜಕರು, ಬಿಜಾಪುರ ಜಿಲ್ಲೆ ಇವರ ದಿ:5.5.2005 ರ ಅಭಿಪ್ರಾಯ
8. ಸರ್ಕಾರದ ಆದೇಶ ಸಂಖ್ಯೆ:ಮಮಇ 258 ಎಸ್‌ಜೆಡಿ 2000 ದಿ:27.4.2001
9. ಕರ್ನಾಟಕ ಲೋಕಾಯುಕ್ತರ ಪತ್ರ ಸಂಖ್ಯೆ:ಎಲ್ ಒಕೆ/ಎಜರ್ ಇ–3/ಇಎನ್ ಕ್ಯೂ /11/2003–04 ದಿ:15.3.2005 ಇಲಾಖಾ ತನಿಖೆ ಇತ್ಯರ್ಥಪಡಿಸಿದ ಬಗ್ಗೆ.
10. ಸರ್ಕಾರಿ ಆದೇಶ ಸಂಖ್ಯೆ:ಮಮಇ 258 ಎಸ್‌ಜೆಡಿ 2000 ದಿ:31.8.2005.
11. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಪತ್ರ ಸಂಖ್ಯೆ: ನಿಸಿಶಿಪ–2/08–09 ದಿ: 13.05.2008

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಶ್ರೀ ಮಲ್ಲಿಕಾರ್ಜುನ ಆರ್. ರೆಡ್ಡಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಬಿಜಾಪುರ (ಗ್ರಾ)., ಬಿಜಾಪುರ ಜಿಲ್ಲೆ ಇವರು ಶ್ರೀಮತಿ ಮಹಾದೇವಿ ಗಂಡ:ಬೆನ್ನಪ್ಪ ಕನ್ನೂರು, ದರ್ಗಾಹಳ್ಳಿ, ಬಿಜಾಪುರ ತಾಲ್ಲೂಕು ಇವರನ್ನು ದರ್ಗಾ ಅಂಗನವಾಡಿ ಕೇಂದ್ರದಲ್ಲಿ ಸಹಾಯಕಿಯಾಗಿ ಮುಂದುವರೆಸಲು ರೂ. 4000/– ಗಳ ಲಂಚವನ್ನು ಡಿಮ್ಯಾಂಡ್ ಮಾಡಿ ಹಣವನ್ನು ಸ್ವೀಕರಿಸುತ್ತಿದ್ದಾಗ, ಲೋಕಾಯುಕ್ತವು ದಿ: 05.09.2000 ರಂದು ಬೀಸಿದ ಬಲೆಗೆ ಸಿಕ್ಕಿಬಿದ್ದಿದ್ದು, ಈ ಅಧಿಕಾರಿಯವರ ವಿರುದ್ಧ ತನಿಖೆಯನ್ನು ಬಾಕಿ ಇಟ್ಟು ಅಮಾನತ್ತುಗೊಳಿಸುವಂತೆ ಡೈರೆಕ್ಟರ್ ಜನರಲ್, ಕರ್ನಾಟಕ ಲೋಕಾಯುಕ್ತ ರವರು ಸರ್ಕಾರಕ್ಕೆ ಪತ್ರ ಬರೆದಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಸರ್ಕಾರಿ ಆದೇಶದಲ್ಲಿ ಶ್ರೀ ಮಲ್ಲಿಕಾರ್ಜುನ ಆರ್. ರೆಡ್ಡಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಬಿಜಾಪುರ ಇವರನ್ನು ತನಿಖೆ ಬಾಕಿ ಇಟ್ಟು, ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಸಮಕ್ಷಮ ನ್ಯಾಯಾಲಯದಲ್ಲಿ ವಿಚಾರಣೆ ನಡೆಸಲು ಅಭಿಯೋಜನಾ ಆದೇಶವನ್ನು ಹೊರಡಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ(4)ರ ಲೋಕಾಯುಕ್ತರವರ ಶಿಫಾರಸ್ಸಿನಂತೆ, ಕ್ರಮ ಸಂಖ್ಯೆ (5)ರಲ್ಲಿ ಸದರಿಯವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು, ಇವರ ಅಮಾನತ್ತನ್ನು ರದ್ದುಗೊಳಿಸಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಇಂಡಿ, ಬಿಜಾಪುರ ಜಿಲ್ಲೆ ಇಲ್ಲಿಗೆ ಪುನರ್ ಸ್ಥಾಪಿಸಿ. ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (6) ರಲ್ಲಿ ವಿಶೇಷ ಸತ್ರ ನ್ಯಾಯಾಲಯ, ಬಿಜಾಪುರ ಇವರು ವಿಶೇಷ ಪ್ರಕರಣ ಸಂಖ್ಯೆ: 13/01 ರ ಸಂಬಂಧ ದಿ: 08.04.2005 ರಂದು ತೀರ್ಪನ್ನು ಹೊರಡಿಸಲಾಗಿದ್ದು, ಸದರಿ ಅಧಿಕಾರಿಯನ್ನು ದೋಷಮುಕ್ತಗೊಳಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (7) ರಲ್ಲಿ ಒಳಾಡಳಿತ ಇಲಾಖೆಯ ಈ ಪ್ರಕರಣವು ಮೇಲ್ಮನವಿಗೆ ಅರ್ಹವಲ್ಲವೆಂದು ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (8) ರ ಆದೇಶದಲ್ಲಿ ಸರ್ಕಾರವು ಸದರಿ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆಯನ್ನು ಲೋಕಾಯುಕ್ತರವರ ಕೋರಿಕೆಯ ಮೇರೆಗೆ ಲೋಕಾಯುಕ್ತಕ್ಕೆ ವಹಿಸಿ, ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (9) ರಲ್ಲಿ ಲೋಕಾಯುಕ್ತವು ಸದರಿ ಅಧಿಕಾರಿಯವರ ವಿರುದ್ಧ ಇಲಾಖಾ ತನಿಖೆಯನ್ನು ಇತ್ಯರ್ಥಗೊಳಿಸಿ, ಅಂತಿಮ ವರದಿಯನ್ನು ಸಲ್ಲಿಸಿದ್ದು, ಸಾಕ್ಷಿ ಆಧಾರಗಳನ್ನು ಪರಿಶೀಲಿಸಿ, ನೋಡಿದಾಗ ಅದು ಸುಳ್ಳು ಎಂದು ಕಂಡುಬರುತ್ತದೆಂದು ತಿಳಿಸಿ, ಪ್ರಕರಣವನ್ನು ಮುಕ್ತಾಯಗೊಳಿಸಲು ಕೋರಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (10) ರಲ್ಲಿ ಸರ್ಕಾರವು, ನ್ಯಾಯಾಲಯದ ತೀರ್ಪು ಹಾಗೂ ಲೋಕಾಯುಕ್ತರವರ ಇಲಾಖಾ ತನಿಖೆಯ ಅಂತಿಮ ವರದಿಯನ್ನು ಆಧಾರಿಸಿ, ಸದರಿ ಅಧಿಕಾರಿಯನ್ನು ಈ ಪ್ರಕರಣದಲ್ಲಿ ದೋಷಮುಕ್ತರನ್ನಾಗಿಸಿ, ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (11) ರ ಪತ್ರದಲ್ಲಿ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ದಿ: 13.08.2005 ರ ಆದೇಶದಲ್ಲಿ ಸದರಿ ಅಧಿಕಾರಿಯನ್ನು ದೋಷಮುಕ್ತರನ್ನಾಗಿಸಿ ಆದೇಶ ಹೊರಡಿಸಿದ್ದು, ಸದರಿ ಆದೇಶದಲ್ಲಿ ಅಮಾನತ್ತು ಅವಧಿ ಪರಿಗಣನೆ ಬಗ್ಗೆ ಆದೇಶ ನೀಡಿರುವುದಿಲ್ಲವಾದ್ದರಿಂದ ಈ ಬಗ್ಗೆ ಸೂಕ್ತ ಆದೇಶ ಹೊರಡಿಸುವಂತೆ ಕೋರಿದ್ದಾರೆ. ಈ ಬಗ್ಗೆ ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 306 ಎಸ್‌ಜೆಡಿ 2008, ಬೆಂಗಳೂರು ದಿನಾಂಕ: 23ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಮಲ್ಲಿಕಾರ್ಜುನ ಆರ್. ರೆಡ್ಡಿ. ಹಿಂದಿನ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಬಿಜಾಪುರ, ಹಾಲಿ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಇಂಡಿ, ಬಿಜಾಪುರ ಜಿಲ್ಲೆ ಇವರನ್ನು ಸತ್ರ ನ್ಯಾಯಾಲಯವು ನಿರ್ದೋಷಿಯೆಂದು ಘೋಷಿಸಿದ್ದು, ಹಾಗೂ ಲೋಕಾಯುಕ್ತವು ನಡೆಸಿದ ಇಲಾಖಾ ತನಿಖೆಯಲ್ಲಿ ಆರೋಪವು ಸಾಬೀತಾಗದ ಕಾರಣ, ಪ್ರಕರಣವನ್ನು ಮುಕ್ತಾಯಗೊಳಿಸಬಹುದಾಗಿ ಲೋಕಾಯುಕ್ತವು ನೀಡಿರುವ ಅಂತಿಮ ವರದಿಯ ಹಿನ್ನೆಲೆಯಲ್ಲಿ ಇವರನ್ನು ಈ ಪ್ರಕರಣದಿಂದ ದೋಷಮುಕ್ತರನ್ನಾಗಿ ಪರಿಗಣಿಸಿ, ಈಗಾಗಲೇ ಆದೇಶಿಸಿದ್ದು, ದಿ:08.11.2000 ರಿಂದ 27.09.2001 ರವರೆಗಿನ ಸದರಿಯವರ ಅಮಾನತ್ತಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 100(3) ಹಾಗೂ (4) ರನ್ವಯ ಕರ್ತವ್ಯದ ಅವಧಿಯೆಂದು ಘೋಷಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1140

**ಆರ್.ಎಂ.ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ವಿಷಯ:** ಶ್ರೀಮತಿ ಗೀತಾ ಡಿ.ಜೋಷಿ, ಮೇಲ್ವಿಚಾರಕಿ, ಶಿಶು ಅಭಿವೃದ್ಧಿ ಯೋಜನೆ, ಹಾನಗಲ್, ಹಾವೇರಿ ಜಿಲ್ಲೆ, ಮಡಿಕೇರಿ, ಇವರ ಸೇವೆಯಿಂದ ವಜಾ ವಿರುದ್ಧ ಸಲ್ಲಿಸಿರುವ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ಆದೇಶ ಸಂಖ್ಯೆ: ನಿಸಿಶಿಅ/8/2000–01 ದಿ:2–11–2006.
2. ಶ್ರೀಮತಿ ಗೀತಾ ಡಿ.ಜೋಷಿರವರ ದಿ: 22–2–2007 ಮೇಲ್ಮನವಿ ಹಾಗೂ ದಿ: 30–1–2008 ರ ಮನವಿ ಪತ್ರ.
3. ಸರ್ಕಾರದ ಇದೇ ಸಮಸಂಖ್ಯೆಯ ಪತ್ರ ದಿ: 29–2–2008.
4. ಕಾರ್ಯದರ್ಶಿಗಳು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ಕೊಠಡಿಯಲ್ಲಿ ದಿ: 19–5–2008 ರಂದು ನಡೆದ ವಿಚಾರಣೆ.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರು ಶ್ರೀಮತಿ ಗೀತಾ ಡಿ.ಜೋಷಿ, ಮೇಲ್ವಿಚಾರಕಿ, ಶಿಶು ಅಭಿವೃದ್ಧಿ ಯೋಜನೆ, ಮುದ್ದೇಬಿಹಾಳ್, ಇವರ ವಿರುದ್ಧದ ಕ್ರಿಮಿನಲ್ ಆರೋಪ ದೋಷ ಸಾಬೀತಾಗಿರುವುದರಿಂದ ನ್ಯಾಯಾಲಯವು ದಂಡನೆಯನ್ನು ವಿಧಿಸಿರುವುದರಿಂದ ಇವರನ್ನು ಕರ್ನಾಟಕ ನಾಗರಿಕ ಸೇವೆ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14(1) ರ ವಿಶೇಷ ಕಾರ್ಯವಿಧಾನದಂತೆ ಸದರಿ ನಿಯಮಾವಳಿಗಳ ನಿಯಮ 8(viii) ರಂತೆ ಸರ್ಕಾರಿ ಸೇವೆಯಿಂದ ವಜಾ ಮಾಡಿ ದಂಡನೆ ವಿಧಿಸಿರುತ್ತಾರೆ. ಸದರಿಯವರು ನಿರ್ದೇಶಕರ ಆದೇಶವನ್ನು ಮರುಪರಿಶೀಲಿಸುವಂತೆ ದಿ: 21–3–2007 ರಲ್ಲಿ ಸರ್ಕಾರಕ್ಕೆ ಮೇಲ್ಮನವಿ ಸಲ್ಲಿಸಿರುತ್ತಾರೆ. ಸರ್ಕಾರವು ಸದರಿ ಮನವಿಯನ್ನು ಪರಿಶೀಲಿಸಿ, ಕರ್ನಾಟಕ ನಾಗರಿಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ 14(1) ಪ್ರಕಾರ ಕ್ರಿಮಿನಲ್ ಆರೋಪದ ಮೇಲೆ ದೋಷ ಸಿದ್ಧಿಯಾದ ಆರೋಪಿತ ನೌಕರರು ಕ್ರಿಮಿನಲ್ ನ್ಯಾಯಾಲಯದ ದಂಡನೆಗೆ ಗುರಿಯಾದರೆ ಆತನು ನ್ಯಾಯಾಲಯದಲ್ಲಿ ಸಲ್ಲಿಸಿರುವ ಮೇಲ್ಮನವಿ ಇತ್ಯರ್ಥವಾಗುವವರೆಗೂ ಕಾಯದೆ ದಂಡನೆ ವಿಧಿಸಬಹುದೆಂದು ತಿಳಿಸಿ ಸದರಿ ಪ್ರಕರಣವು ನ್ಯಾಯಾಲಯದಲ್ಲಿ ಇತ್ಯರ್ಥಗೊಂಡ ನಂತರ ಮುಂದಿನ ಕ್ರಮ ತೆಗೆದುಕೊಳ್ಳಲಾಗುವುದೆಂದು ಶ್ರೀಮತಿ ಗೀತಾ ಡಿ.ಜೋಷಿ ರವರಿಗೆ ದಿ: 29–2–2008 ರ ಪತ್ರದಲ್ಲಿ ಹಿಂಬರಹ ನೀಡಲಾಗಿದೆ. ತದನಂತರ ಸದರಿಯವರು ಪುನಃ ದಿ: 30–1–2008 ರ ಮನವಿ ಪತ್ರದಲ್ಲಿ ತಮ್ಮನ್ನು ಸೇವೆಗೆ ಪುನರ್ ಸ್ಥಾಪಿಸುವಂತೆ ಕೋರಿಕೊಂಡಿರುವ ಮೇರೆಗೆ ದಿ: 19–5–2008 ರಂದು ಕಾರ್ಯದರ್ಶಿಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ಮನವಿಯನ್ನು ಕೂಲಂಕಷವಾಗಿ

ಪರಿಶೀಲಿಸಲಾಗಿ, ಈ ಸಂದರ್ಭದಲ್ಲಿ ಶ್ರೀಮತಿ ಗೀತಾ ಡಿ.ಜೋಷಿ ರವರು ನೀಡಿರುವ ಹೇಳಿಕೆಯಲ್ಲಿ ಆಕೆಯ ನಿರಾಪರಾಧಿತನವನ್ನು ಸಾಬೀತು ಪಡಿಸುವಂತಹ ಯಾವುದೇ ಹೊಸ ಅಂಶಗಳು ಇರಲಿಲ್ಲವಾದ್ದರಿಂದ ಅವರ ದಿ: 22–2–2007, ದಿ: 30–1–2008 ಹಾಗೂ ದಿ: 19–5–2008 ರ ಮೇಲ್ಮನವಿಯನ್ನು ತಿರಸ್ಕರಿಸಲು ನಿರ್ಧರಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 131 ಎಸ್‌ಜೆಡಿ 2008, ಬೆಂಗಳೂರು, ದಿನಾಂಕ: 03ನೇ ಜೂನ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀಮತಿ ಗೀತಾ ಡಿ.ಜೋಷಿ, ಮೇಲ್ವಿಚಾರಕಿ, ಶಿಶು ಅಭಿವೃದ್ಧಿ ಯೋಜನೆ, ಮುದ್ದೇಬಿಹಾಳ್, ಇವರನ್ನು ಕರ್ನಾಟಕ ನಾಗರಿಕ ಸೇವಾ (ಸಿಸಿಎ) ನಿಯಮ 1957ರ ನಿಯಮ 8(Viii) ರ ಪ್ರಕಾರ ಸೇವೆಯಿಂದ ವಜಾ ಮಾಡಿರುವ ವಿರುದ್ಧ ಸಲ್ಲಿಸಿರುವ ಮೇಲ್ಮನವಿಯನ್ನು ಸರ್ಕಾರವು ಪರಿಶೀಲಿಸಿ ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 925

**ಆರ್.ಎಂ.ಚಂದ್ರಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ವಿಷಯ:** ಶ್ರೀ ಬಿ.ಸಿ.ಬೆಟ್ಟೇಗೌಡ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ನಾಗಮಂಗಲ, ಮಂಡ್ಯ ಜಿಲ್ಲೆ ಇವರನ್ನು ಸೇವೆಯಲ್ಲಿ ಪುನರ್ ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಮಮಇ 364 ಎಸ್‌ಜೆಡಿ 2008 ದಿ: 23.07.2008
2. ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖಾ ಸಚಿವರ ಟಿಪ್ಪಣಿ ಸಂಖ್ಯೆ: ಮಮ ಅಇ/76/2008 ದಿ: 22.07.2008
3. ಶ್ರೀ ಬಿ.ಸಿ. ಬೆಟ್ಟೇಗೌಡ, ಇವರ ಮನವಿ ದಿ:26.07.2008 ಹಾಗೂ ದಿ: 11.08.2008
4. ಉಪ ನಿರ್ದೇಶಕರು, ಮ.ಮ.ಅ.ಇ. ಮಂಡ್ಯ ಜಿಲ್ಲೆ ಇವರ ಪತ್ರಸಂಖ್ಯೆ: ಉನಿಮಂ/ಮಮಇ.ಅಅ ಬಗ್ಗೆ/2008–09 ದಿ:28.07.2008.
5. ಸರ್ಕಾರಿ ಅ.ಸ. ಪತ್ರ ಸಂಖ್ಯೆ: ಮಮಇ 364 ಎಸ್ ಜೆಡಿ 2008 ದಿ: 04.09.2008

**ಪ್ರಸ್ತಾವನೆ:–**

ಮೇಲೆ (1) ರಲ್ಲಿ ಓದಲಾದ ದಿನಾಂಕ: 23.07.2008 ರ ಆದೇಶದಲ್ಲಿ ಶ್ರೀ ಬಿ.ಸಿ. ಬೆಟ್ಟೇಗೌಡ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ನಾಗಮಂಗಲ, ಮಂಡ್ಯ ಜಿಲ್ಲೆ ಇವರನ್ನು ಅಂಗನವಾಡಿ ಕಾರ್ಯಕರ್ತೆಯರ ನೇಮಕಾತಿಯಲ್ಲಿ ಕರ್ತವ್ಯ ನಿರ್ಲಕ್ಷ್ಯತೆ ಹಾಗೂ ಪರಿಶಿಷ್ಟ ಜಾತಿಗೆ ಸೇರಿದ ಅಂಗನವಾಡಿ ಕಾರ್ಯಕರ್ತೆಯನ್ನು ವಿನಾ ಕಾರಣ ಕಛೇರಿಗೆ ಅಲೆಸುವ ಆಪಾದನೆಗೆ ಸಂಬಂಧಿಸಿದಂತೆ ಮೇಲೆ ಓದಲಾದ (2)ರ ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವರ ಟಿಪ್ಪಣಿಯಲ್ಲಿ ನೀಡಿದ ಆದೇಶದ ಮೇರೆಗೆ, ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿತ್ತು, ತದನಂತರ, ಸದರಿಯವರು ದಿ: 26.07.2008 ಹಾಗೂ 11.08.2008 ರ ಮನವಿ ಪತ್ರಗಳಲ್ಲಿ ತಮ್ಮ ವಿರುದ್ಧದ ಆಪಾದನೆಗಳ ಬಗ್ಗೆ ಸಮಜಾಯಿಷಿ ನೀಡಿ, ತಾವು ಅಂಗನವಾಡಿ ಕಾರ್ಯಕರ್ತೆಯರ ನೇಮಕಾತಿಯಲ್ಲಿ ಯಾವುದೇ ನಿರ್ಲಕ್ಷ್ಯತೆಯನ್ನು ತೋರಿಸಿಲ್ಲವೆಂದು ಹಾಗೂ ದಲಿತ ವರ್ಗಕ್ಕೆ ಸೇರಿದ ಮಹಿಳೆಯನ್ನು ವಿನಾಕಾರಣ ಕಛೇರಿಗೆ ಅಲೆಸಿಲ್ಲವೆಂದು ತಿಳಿಸಿ, ತಮ್ಮನ್ನು ಸೇವೆಗೆ ಪುನರ್ ಸ್ಥಾಪಿಸುವಂತೆ ಕೋರಿರುತ್ತಾರೆ. ಮೇಲೆ ಓದಲಾದ (4) ರ ಪತ್ರದಲ್ಲಿ ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಮಂಡ್ಯ ಇವರು ಸದರಿ ವಿಷಯದ ಬಗ್ಗೆ ವರದಿ ಸಲ್ಲಿಸುತ್ತಾ, ಶ್ರೀಮತಿ ಬಿ.ಎಸ್. ಶಿವರತ್ನಕುಮಾರಿ, ಇವರು ಸ್ಥಳೀಯರಲ್ಲವೆಂಬ ಕಾರಣಕ್ಕಾಗಿ ತಾಲ್ಲೂಕು ಪಂಚಾಯ್ತಿ ಅಧ್ಯಕ್ಷರು, ಸದಸ್ಯರು ಹಾಗೂ ಗ್ರಾಮಸ್ಥರು ದೂರು ಸಲ್ಲಿಸಿದ ಹಿನ್ನೆಲೆಯಲ್ಲಿ ಅನಾವಶ್ಯಕ ಗೊಂದಲಗಳಿಗೆ ಅವಕಾಶ ಮಾಡಿಕೊಡಬಾರದೆಂಬ ಉದ್ದೇಶದಿಂದ ತಹಶೀಲ್ದಾರರವರಿಂದ ವಾಸಸ್ಥಳ ಪುನರ್ ಪರಿಶೀಲನೆಯ ಪತ್ರದ ನಿರೀಕ್ಷೆಯಿಂದಾಗಿ ಅಂಗನವಾಡಿ ಕಾರ್ಯಕರ್ತೆಯ ನೇಮಕಾತಿಯಲ್ಲಿ ತಡವಾಯಿತೇ ಹೊರತು, ದುರುದ್ದೇಶದಿಂದ ಅಲ್ಲವೆಂದು ತಿಳಿಸಿರುತ್ತಾರೆ. ಆದಾಗ್ಯೂ ಪ್ರಕರಣದ ಸತ್ಯಾಸತ್ಯತೆಯನ್ನು ಅರಿಯಲು ವಿಚಾರಣೆ ನಡೆಸಲು ಉದ್ದೇಶಿಸಿ, ದಿ: 04.09.2008 ರ ಸರ್ಕಾರದ ಅರೆ ಸರ್ಕಾರಿ ಪತ್ರದಲ್ಲಿ ಸದರಿ ಅಧಿಕಾರಿಯ ವಿರುದ್ಧದ ಆರೋಪಣಾ ಪಟ್ಟಿಯನ್ನು ಸಿದ್ಧಪಡಿಸಿ, ಕಳುಹಿಸುವಂತೆ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರನ್ನು ಕೋರಲಾಗಿದೆ. ಈ ಅಂಶಗಳ ಹಿನ್ನೆಲೆಯಲ್ಲಿ ಮಾನ್ಯ ಇಲಾಖಾ ಸಚಿವರು ಶ್ರೀ ಬಿ.ಸಿ. ಬೆಟ್ಟೇಗೌಡ, ಶಿಶು ಅಭಿವೃದ್ಧಿ ಯೋಜ ನಾಧಿಕಾರಿ, ನಾಗಮಂಗಲ, ಮಂಡ್ಯ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಸೇವೆಗೆ ಪುನರ್ ಸ್ಥಾಪಿಸುವಂತೆ ಆದೇಶಿಸಿರುತ್ತಾರೆ. ಆದುದರಿಂದ ಸದರಿಯವರನ್ನು ಸೇವೆಗೆ ಪುನರ್ ಸ್ಥಾಪಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 364 ಎಸ್‌ಜೆಡಿ 2008 ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ – ಶ್ರೀ ಬಿ.ಸಿ. ಬೆಟ್ಟೇಗೌಡ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ನಾಗಮಂಗಲ, ಮಂಡ್ಯ ಜಿಲ್ಲೆ, ಇವರನ್ನು ಅವರ ಮೇಲಿನ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಇವರ ಅಮಾನತ್ತನ್ನು ಈ ತಕ್ಷಣದಿಂದಲೇ ಜಾರಿಗೆ ಬರುವಂತೆ ತೆರವುಗೊಳಿಸಿ, ಸೇವೆಗೆ ಪುನರ್ ಸ್ಥಾಪಿಸಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಕೆ.ಆರ್. ನಗರ, ಮೈಸೂರು ಜಿಲ್ಲೆ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1492

**ಆರ್.ಎಂ.ಚಂದ್ರಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ–2
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ವಿಷಯ:** ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯಲ್ಲಿ ಹಿರಿಯ ನಾಗರಿಕರ ನೀತಿಯಡಿ ಸೃಜಿಸಲಾದ 12 ಹುದ್ದೆಗಳನ್ನು ಮರುವಿನ್ಯಾಸದ ಮೂಲಕ ತುಂಬಲು ನಿಗದಿಪಡಿಸಿರುವುದನ್ನು ನಿಯೋಜನೆ ಅಥವಾ ನಿಯಮಾನುಸಾರ ಭರ್ತಿ ಮಾಡುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಮಮಇ 360 ಎಸ್‌ಜೆಡಿ 2003 ದಿ: 26–10–2004

2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಕಛೇರಿಯ ಪತ್ರ ಸಂಖ್ಯೆ: ನಿಸಗೆ:87/2007–08 ದಿ: 25–2–2008.

3. ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯ ಕಛೇರಿಯ ಪತ್ರ ಸಂಖ್ಯೆ: ನಿಅಕಇ/ಆಡಳಿತ–03/ಇನಾನಿ/07–08/14943 ದಿ: 1–3–2008.

4. ಸರ್ಕಾರದ ಅಧಿಸೂಚನೆ ಸಂಖ್ಯೆ: ಮಮಇ 263 ಎಸ್‌ಜೆಡಿ 2008 ದಿ: 20–6–2008

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ದಿ: 26–10–2004 ರ ಆದೇಶದಲ್ಲಿ ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯಲ್ಲಿ ರಾಜ್ಯದ ನೀತಿಯನ್ನು ಅನುಷ್ಠಾನಗೊಳಿಸಲು ಅಧಿಕಾರಯುತ ಸಮಿತಿಯ ಸಭೆಯಲ್ಲಿ ಅನುಮೋದನೆ ನೀಡಿರುವ ಹಿನ್ನೆಲೆಯಲ್ಲಿ ಈ ಕೆಳಕಂಡ ವಿವಿಧ ವೃಂದಗಳಲ್ಲಿ 12 ಹುದ್ದೆಗಳನ್ನು ಸೃಜಿಸಿ ಮರುವಿನ್ಯಾಸದ (Re-deployment) ಮೂಲಕ ಆ ಹುದ್ದೆಗಳನ್ನು ಭರ್ತಿ ಮಾಡಲು ಆದೇಶಿಸಲಾಗಿದೆ.

1. ಜಂಟಿ/ಉಪನಿರ್ದೇಶಕರು – 1 ಹುದ್ದೆ
2. ಶಾಖಾಧಿಕಾರಿಗಳು – 1 ಹುದ್ದೆ
3. ಅಧೀಕ್ಷಕರು – 1 ಹುದ್ದೆ
4. ಶೀಘ್ರಲಿಪಿಗಾರರು – 1 ಹುದ್ದೆ
5. ಪ್ರಥಮ ದರ್ಜೆ ಸಹಾಯಕರು – 2 ಹುದ್ದೆ
6. ದ್ವಿತೀಯ ದರ್ಜೆ ಸಹಾಯಕರು – 2 ಹುದ್ದೆ
7. ಕಂಪ್ಯೂಟರ್ ಅಸಿಸ್ಟೆಂಟ್ – 1 ಹುದ್ದೆ
8. ಗ್ರೂಪ್ ಡಿ – 2 ಹುದ್ದೆ
9. ವಾಹನ ಚಾಲಕರು – 1 ಹುದ್ದೆ

ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ(2) ರಲ್ಲಿ ಓದಲಾದ ದಿ: 25–2–2008 ರ ಪತ್ರದಲ್ಲಿ ಸರ್ಕಾರದ ಆದೇಶ ಸಂಖ್ಯೆ: ಮಮಇ 460 ಎಸ್‌ಜೆಡಿ 2003 ದಿ: 26–10–2004 ರ ಆದೇಶದಲ್ಲಿ ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯಲ್ಲಿ ರಾಜ್ಯದ ಹಿರಿಯ ನಾಗರಿಕರ ನೀತಿಯನ್ನು ಅನುಷ್ಠಾನಗೊಳಿಸಲು ಬೇಕಾಗುವ ವಿವಿಧ ವೃಂದಗಳ ಮೇಲ್ಕಾಣಿಸಿದ 12 ಹುದ್ದೆಗಳನ್ನು ಮರುವಿನ್ಯಾಸದ ಮೂಲಕ (Re–deployment) ಭರ್ತಿ ಮಾಡುವ ಬದಲಾಗಿ ನಿಯೋಜನೆ ಮೇಲೆ ಭರ್ತಿ ಮಾಡುವ ಬಗ್ಗೆ ಸಕಾರಣಗಳನ್ನು ನೀಡಿ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ನಿರ್ದೇಶಕರು, ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿ: 1–3–2008 ರ ಪತ್ರದಲ್ಲಿ ಸರ್ಕಾರದ ಆದೇಶ ಸಂಖ್ಯೆ: ಮಮಇ 460 ಎಸ್‌ಜೆಡಿ 2003 ದಿ: 26–10–2004 ರ ಆದೇಶದಲ್ಲಿ ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯಲ್ಲಿ ರಾಜ್ಯದ ಹಿರಿಯ ನಾಗರಿಕರ ನೀತಿಯನ್ನು ಅನುಷ್ಠಾನಗೊಳಿಸಲು ಬೇಕಾಗುವ ವಿವಿಧ ವೃಂದಗಳ ಒಟ್ಟು 12 ಹುದ್ದೆಗಳನ್ನು ಮರುವಿನ್ಯಾಸದ ಮೂಲಕ (Re-deployment) ಭರ್ತಿ ಮಾಡುವ ಆದೇಶವನ್ನು ಬದಲಾವಣೆ ಮಾಡಲು ಅಧಿಕಾರಯುಕ್ತ ಸಮಿತಿ ಮುಂದೆ ಮಂಡಿಸಬೇಕಾಗುತ್ತದೆಯೆಂದು ಅಭಿಪ್ರಾಯ ನೀಡಿರುತ್ತದೆ.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ದಿ: 20–6–2008 ರ ಅಧಿಸೂಚನೆಯಲ್ಲಿ ದಿ: 24–6–2008 ರ ತಿದ್ದುಪಡಿ ಅಧಿಸೂಚನೆಯನ್ನು ಒಳಗೊಂಡಂತೆ ಶ್ರೀ ಎಸ್.ಶಂಕರಪ್ಪ, ಸಹಾಯಕ ನಿರ್ದೇಶಕರು, ವಾರ್ತಾ ಇಲಾಖೆ, ಮಂಡ್ಯ ಇವರ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಆಯುಕ್ತರು ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯ ನಿರ್ದೇಶನಾಲಯದಲ್ಲಿ ಖಾಲಿ ಇರುವ ಶಾಖಾಧಿಕಾರಿ ಹುದ್ದೆಗೆ ನಿಯೋಜನೆ ಮೇಲೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ದಿ: 1–4–2004 ರ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 101 ಎಸ್‌ಆರ್‌ಡಿ 98 (ಭಾ) ರಲ್ಲಿ ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರಚಿಸಿದ್ದು, ಅದನ್ನು ಪರಿಷ್ಕರಿಸಲು ಕ್ರಮ ಕೈಗೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ದಿ: 4–9–2008 ರಂದು ಸರ್ಕಾರ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರ ಸಭೆಯಲ್ಲಿ ನಡೆದ ಸಭೆಯಲ್ಲಿ ವೃಂದ ಮತ್ತು ನೇಮಕಾತಿ ನಿಯಮದ ಮಾರ್ಪಾಟು ಒಳಗೊಂಡಿರುವುದೇ ಎಂಬ ಕುರಿತು ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರು ಸ್ಪಷ್ಟೀಕರಿಸಲು ಸೂಚನೆ ನೀಡಿದ್ದಾರೆ. ಈ ಬಗ್ಗೆ ಈಗಾಗಲೇ ಇಲಾಖೆಯಲ್ಲಿ ದಿ: 1–4–2004 ರಿಂದ ವೃಂದ ಮತ್ತು ನೇಮಕಾತಿ ನಿಯಮಗಳು ಅಸ್ತಿತ್ವಕ್ಕೆ ಬಂದಿರುವುದನ್ನು ಗಮನಿಸಿದಾಗ ಬಹಳ ಕಾಲದಿಂದ ತುಂಬದೆಯೇ ಹಾಗೆ ಖಾಲಿ ಉಳಿದಿರುವ ಈ ಹುದ್ದೆಗಳನ್ನು ನಿಯಮಾನುಸಾರ ನಿಯೋಜನೆಯ ಮೇಲೆ ತುಂಬಲು ಅವಕಾಶವಿದೆ ಎಂದು ಕಂಡು ಬರುತ್ತದೆ.

ಅಂತೆಯೇ ಪ್ರಸ್ತಾವನೆಯನ್ನು ಪರಿಶೀಲಿಸಿದ್ದು, ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಯ ನಿಯಮ 16 ರ ಅನ್ವಯ ನಿಯೋಜನೆಯಿಂದ ಈ ಹುದ್ದೆಗಳನ್ನು ತುಂಬಲು ಅವಕಾಶವಿದೆ ಎಂದು ಕಂಡುಬಂದಿದೆ. ಸದರಿ ನಿಯಮದ ಸುಸಂಬದ್ಧ ಉದ್ಧೃತಿಯನ್ನು ಕೆಳಗೆ ನೀಡಿದೆ:–

16. Relaxation of rules relating to appointement and Qualifications:-

Not withstanding anything contained in these rules or the rules of recruitment specially made in respect of any service or post, The Government may, for reasons to be recorded in writing-

(a) appoint to a post;

(i) an officer of the Defence Serices, an All India Service or a Civil Service of the Union, or the civil Service of any other State;

(ii) an officer holding a post of an equivalent grade by transfer or by deputation from any other service of the State for recruitment to which these rules apply.

ಸದರಿ ಹುದ್ದೆಗಳನ್ನು ಹಾಗೂ ದಿ: 26–10–2004 ರ ಆದೇಶದಲ್ಲಿರುವ ಇತರೆ ಹುದ್ದೆಗಳನ್ನು ಈಗಾಗಲೇ ಸೃಜಿಸಿದ್ದರೂ, ಮರುವಿನ್ಯಾಸದ ಮೂಲಕ ತುಂಬಲು 2004 ರಿಂದ ಸಾಧ್ಯವಾಗದೇ ಇರುವುದರಿಂದ ಹಾಗೂ ಹಿರಿಯ ನಾಗರಿಕರ ನೀತಿಯನ್ನು ತ್ವರಿತವಾಗಿ ಅನುಷ್ಠಾನ ಗೊಳಿಸಬೇಕಾಗಿರುವುದರಿಂದ ಹಾಗೂ ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಯ ನಿಯಮ 16(ಎ)(ii) ರಡಿ ನಿಯಮಾನುಸಾರ ಮೇಲಿನ ಹುದ್ದೆಗಳನ್ನು ಹಾಗೂ ಇತರೆ ಹುದ್ದೆಗಳನ್ನು ತುಂಬಲು ಅವಕಾಶ ಇರುವುದರಿಂದ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಹಾಗೂ ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆ, ಇವರುಗಳು ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ಸೂಕ್ತ ತಿದ್ದುಪಡಿ ಬಾಕಿ ಇಟ್ಟು ಸದರಿ ಪ್ರಕ್ರಿಯೆ ಅಂತಿಮಗೊಳ್ಳುವವರೆಗೆ ಮರುವಿನ್ಯಾಸದ ಮೂಲಕ (Re-deployment) ಭರ್ತಿ ಮಾಡಬೇಕಾಗಿರುವ ಅಂಗವಿಕಲರ ಹಾಗೂ ಹಿರಿಯ ನಾಗರಿಕರ ವಿವಿಧ ವೃಂದಗಳ ಒಟ್ಟು 12 ಹುದ್ದೆಗಳನ್ನು ನಿಯೋಜನೆಯ ಮೂಲಕ ಭರ್ತಿ ಮಾಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 31 ಎಸ್‌ಜೆಡಿ 2008, ಬೆಂಗಳೂರು ದಿನಾಂಕ:24ನೇ ಅಕ್ಟೋಬರ್ 2008.**

ಮೇಲೆ ವಿವರಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯಲ್ಲಿ ಹಿರಿಯ ನಾಗರಿಕರ ನೀತಿಯನ್ನು ತಕ್ಷಣವೇ ಅನುಷ್ಠಾನಗೊಳಿಸಲು ಅಗತ್ಯವಿರುವ ಹಿನ್ನೆಲೆಯಲ್ಲಿ ಪ್ರಸ್ತಾವನೆಯಲ್ಲಿ ತಿಳಿಸಿರುವ ವಿವಿಧ ವೃಂದಗಳ ಒಟ್ಟು 12 ಹುದ್ದೆಗಳಲ್ಲಿ ಶಾಖಾಧಿಕಾರಿ ಹುದ್ದೆಯನ್ನು ದಿ: 25–6–2008 ರಿಂದ ಜಾರಿಗೆ ಬರುವಂತೆ ಹಾಗೂ ಇತರೆ ಹುದ್ದೆಗಳನ್ನು ಕೂಡಲೇ ಜಾರಿಗೆ ಬರುವಂತೆ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಆದೇಶ ಹೊರಡಿಸುವವರೆಗೆ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಯ ನಿಯಮ 16 16(ಎ)(ii) ರಡಿ ಈ ಕೆಳಕಂಡ ಹುದ್ದೆಗಳನ್ನು ನಿಯೋಜನೆಯ ಮೂಲಕ ಭರ್ತಿ ಮಾಡಲು ಆದೇಶಿಸಿದೆ:–

1)ಜಂಟಿ/ಉಪನಿರ್ದೇಶಕರು – 1 ಹುದ್ದೆ
2)ಶಾಖಾಧಿಕಾರಿಗಳು – 1 ಹುದ್ದೆ
3)ಅಧೀಕ್ಷಕರು – 1 ಹುದ್ದೆ
4)ಶೀಘ್ರಲಿಪಿಗಾರರು – 1 ಹುದ್ದೆ
5)ಪ್ರಥಮ ದರ್ಜೆ ಸಹಾಯಕರು – 2 ಹುದ್ದೆ
6)ದ್ವಿತೀಯ ದರ್ಜೆ ಸಹಾಯಕರು – 2 ಹುದ್ದೆ
7)ಕಂಪ್ಯೂಟರ್ ಅಸಿಸ್ಟೆಂಟ್ – 1 ಹುದ್ದೆ
8)ಗ್ರೂಪ್ 'ಡಿ' – 2 ಹುದ್ದೆ
9)ವಾಹನ ಚಾಲಕರು – 1 ಹುದ್ದೆ

ಈ ಆದೇಶವನ್ನು ದಿ: 04–09–2008 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುತ ಸಮಿತಿಯು ನೀಡಿದ ಸೂಚನೆಯನ್ವಯ ಪರಿಶೀಲಿಸಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1536

**ಆರ್.ಎಂ.ಚಂದ್ರಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ವಿಷಯ:** ಶ್ರೀ ಕೆ.ಸತ್ಯನಾರಾಯಣಾಚಾರ್, ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿ, ದಾವಣಗೆರೆ, ಇವರನ್ನು ಅಮಾನತ್ತಿನಲ್ಲಿರಿಸಿರುವ ಕುರಿತು.

**ಓದಲಾಗಿದೆ:** 1. ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ದಾವಣಗೆರೆ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ:D.D.Dvg/WCD/D.W/07-08/3965 dt:19-3-2008

2. ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ದಾವಣಗೆರೆ, ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ:ಉನಿಧಾ/ಮಮಇ/ಅಂಕ/08–09 ದಿ:28.6.2008.

ಪ್ರಸ್ತಾವನೆ:–

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ದಿನಾಂಕ: 19–03–2008 ರ ಪತ್ರ ಹಾಗೂ ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ದಿ: 28–6–2008 ರ ಉಪನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ದಾವಣಗೆರೆ, ಇವರ ಪತ್ರಗಳಲ್ಲಿ ಶ್ರೀ ಕೆ.ಆರ್. ಸತ್ಯನಾರಾಯಣಾಚಾರ್, ಜಿಲ್ಲಾ ಅಂಗವಿಕಲ ಮತ್ತು ಹಿರಿಯ ನಾಗರಿಕರ ಕಲ್ಯಾಣಾಧಿಕಾರಿ, ದಾವಣಗೆರೆ, ಇವರು ಸ್ವತಂತ್ರ ಅಧಿಕಾರಿಯಾಗಿ ಅವರ ಹಂತದಲ್ಲೇ ನೇರವಾಗಿ ಜಿಲ್ಲಾ ಪಂಚಾಯತ್, ಜಿಲ್ಲಾಧಿಕಾರಿ ಹಾಗೂ ನಿರ್ದೇಶನಾಲಯದೊಂದಿಗೆ ವ್ಯವಹರಿಸುತ್ತಿದ್ದಾರೆಂದು ಈ ಬಗ್ಗೆ ಅವರಿಗೆ ಮೆಮೋ/ಪತ್ರಗಳನ್ನು ನೀಡಿದ್ದರೂ ಸಹ, ನಿರ್ದೇಶನಾಲಯವು ಅವರಿಗೆ ಅವರ ಈ ನಡವಳಿಕೆಗೆ ಬೆಂಬಲ ಸೂಚಿಸುತ್ತಿದೆಯೆಂದೂ, ಸದರಿಯವರು ಉಪನಿರ್ದೇಶಕರ ಅನುಮತಿ/ಒಪ್ಪಿಗೆ ಇಲ್ಲದೆ ಎನ್.ಜಿ.ಓ.ಗಳಿಗೆ ಅನುದಾನ ಬಿಡುಗಡೆಗೊಳಿಸುವ ಪ್ರಸ್ತಾವನೆಯನ್ನು ಅಂದರೆ ವೃದ್ಧಾಶ್ರಮ, ವಸತಿಗೃಹ, ಅಶಕ್ತ ಬಾಲಕರ ಶಾಲೆಗಳು, ಡ್ರೈ, ಟಿ.ಟಿ.ಪಿ. ಮುಂತಾದವುಗಳನ್ನು ನೇರವಾಗಿ ಜಿಲ್ಲಾ ಪಂಚಾಯತ್ ಮತ್ತು ನಿರ್ದೇಶನಾಲಯಕ್ಕೆ ಸಲ್ಲಿಸುತ್ತಿದ್ದಾರೆಂದು ಹಾಗೂ ಉಪನಿರ್ದೇಶಕರ ಅನುಮತಿ ಇಲ್ಲದೆ ರಜೆ ಮೇಲೆ ತೆರಳುತ್ತಿರುತ್ತಾರೆಂದು ಉಪನಿರ್ದೇಶಕರಿಗೆ ತಿಳಿಸದೆ ಸರ್ಕಾರೇತರ ಸಂಸ್ಥೆಗಳು ಆಚರಿಸುತ್ತಿರುವ C.B.R. ನೆಟ್‌ವರ್ಕ್ಸ್ ಪ್ರೋಗ್ರಾಮ್ಸ್ ಮತ್ತು A.D.I.P. ಕ್ಯಾಂಪಿಯನ್ ಪ್ರೋಗ್ರಾಂಗಳ ಬಗ್ಗೆ ನೇರವಾಗಿ ನೇಮಕಾತಿ ಆದೇಶಗಳನ್ನು VRW`s ಮತ್ತು MRW`s ಗಳಿಗೆ ನೀಡಿರುತ್ತಾರೆಂದು, C.B.R. ಮತ್ತು A.D.I.P. ಪ್ರಗತಿಗಳ ಬಗ್ಗೆ ನಿರ್ದೇಶನಾಲಯವು ಮಂಜೂರಾತಿ ಆದೇಶ ಹೊರಡಿಸಿ ಪ್ರತಿಯನ್ನು ಉಪನಿರ್ದೇಶಕರಿಗೆ ಗುರುತಿಸಿದಾಗಲೇ ಉಪನಿರ್ದೇಶಕರ ಗಮನಕ್ಕೆ ಬಂದಿದ್ದು, ಉಪನಿರ್ದೇಶಕರು, ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳಿಗೆ ಅನೇಕ ನೋಟೀಸ್‌ಗಳನ್ನು ಜಾರಿ ಮಾಡಿದಾಗ ಅವರು ಉತ್ತರಿಸಿರುವುದಿಲ್ಲವೆಂದು ಈ ಬಗ್ಗೆ ನಿರ್ದೇಶನಾಲಯವು ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳ ಬಗ್ಗೆ ಯಾವುದೇ ಕ್ರಮ ಜರುಗಿಸಿರುವುದಿಲ್ಲವೆಂದು ಹಾಗೂ ಉಪನಿರ್ದೇಶಕರು ಬರೆದ ಪತ್ರಗಳನ್ನು ಕಡೆಗಣಿಸಿರುವುದರಿಂದ, ಜಿಲ್ಲಾ ಮಟ್ಟದಲ್ಲಿ ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಚಟುವಟಿಕೆಗಳನ್ನು ಮೇಲ್ವಿಚಾರಣೆ ನಡೆಸಿ ಜಾರಿಗೊಳಿಸಲು ಉಪನಿರ್ದೇಶಕರು ದುರ್ಬಲರಾಗಿರುತ್ತಾರೆಂದು ವರದಿಯಾಗಿದೆ.

ಮುಂದುವರೆದು ನಿರ್ದೇಶನಾಲಯವು, ಉಪನಿರ್ದೇಶಕರಿಗೆ ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳು ಸಲ್ಲಿಸುವ ಬಿಲ್ಲುಗಳಿಗೆ ಅಂದರೆ ಹಾಸ್ಟಲ್, ತರಬೇತಿ ಕೇಂದ್ರ, ಹಿರಿಯ ನಾಗರಿಕರ ಕೇಂದ್ರಗಳು ಮತ್ತು ಪಾಲನೆ ಕೇಂದ್ರಗಳು, A.D.I.P. ಕಾರ್ಯಕ್ರಮಗಳು, C.B.R. ಕಾರ್ಯಕ್ರಮಗಳು, ಹಾಗೂ ಇತರೆ ಕಾರ್ಯಕ್ರಮಗಳನ್ನು ಜಿಲ್ಲಾ ಹಂತದಲ್ಲಿ ಪಾಲಿಸುವ ಬಗ್ಗೆ ಕೌಂಟರ್ ಸಿಗ್ನೇಚರ್ ಮಾಡಲು ಮಾತ್ರ ಅಧಿಕಾರ ನೀಡಿರುತ್ತದೆಂದು, ಫಲಾನುಭವಿಗಳ ಆಯ್ಕೆ ಬಗ್ಗೆ ಹಾಗೂ ಹಾಸ್ಟೆಲ್ ಮತ್ತು ತರಬೇತಿ ಕೇಂದ್ರಗಳ ಸಿಬ್ಬಂದಿಗಳ ಆಯ್ಕೆ ಬಗ್ಗೆ ಉಪನಿರ್ದೇಶಕರಿಗೆ ಅಧಿಕಾರ ನೀಡಿರುವುದಿಲ್ಲವೆಂದು, ನಿರ್ದೇಶನಾಲಯವು ಮಂಜೂರಾತಿ ಆದೇಶದ ಪ್ರತಿಯನ್ನು ಕಳುಹಿಸಿ ಬಿಲ್ಲುಗಳಿಗೆ ಮೇಲು ಸಹಿ ಮಾಡಲು ಉಪನಿರ್ದೇಶಕರಿಗೆ ಕಳುಹಿಸಿದಾಗ, ಸಾರ್ವಜನಿಕ ಹಿತದೃಷ್ಟಿಯಿಂದ ಉಪನಿರ್ದೇಶಕರು ಮೇಲು ಸಹಿ ಮಾಡಿರುವುದಾಗಿ ವರದಿಯಾಗಿದೆ.

ಉಪನಿರ್ದೇಶಕರು, ಅಂಗವಿಕಲರ ಕೋಶಕ್ಕೆ ಕಛೇರಿ ಸ್ಥಳಾವಕಾಶ ಮತ್ತು ಗಣಕ ಯಂತ್ರ ಮತ್ತು ಇತರೆ ಸಹಕಾರಗಳನ್ನು ನೀಡುತ್ತಿದ್ದು, ಈ ಎಲ್ಲಾ ಮಾಹಿತಿಗಳನ್ನು ಹಿಂದಿನ ಅಂಗವಿಕಲರ ಕಲ್ಯಾಣ ಇಲಾಖೆಯ ನಿರ್ದೇಶಕರಾದ ಶ್ರೀ ಅಶೋಕ್, ಶ್ರೀ ವಿ.ರಾಮರೆಡ್ಡಿ, ಮತ್ತು ಶ್ರೀ ಎಂ.ವಿ.ವೇದಮೂರ್ತಿ, ಇವರುಗಳಿಗೆ ಅರೆ ಸರ್ಕಾರಿ ಪತ್ರದ ಮುಖಾಂತರ ಮತ್ತು ದೂರವಾಣಿ ಮುಖಾಂತರ ನೀಡಲಾಗಿದೆಯೆಂದು ಹಾಗೂ 3 ತಿಂಗಳ ಹಿಂದೆ ನಿರ್ದೇಶಕರು ದಾವಣಗೆರೆ ಜಿಲ್ಲೆಗೆ ಭೇಟಿ ನೀಡಿದ ಸಮಯದಲ್ಲಿಯೂ ಸಹ ಚರ್ಚಿಸಲಾಗಿದೆಯೆಂದು, ಆದರೆ ಯಾವುದೇ ಪ್ರಗತಿ ದೊರಕಿಲ್ಲವೆಂದು ವರದಿ ಮಾಡಿದ್ದಾರೆ.

ಮಹಾತ್ಮಗಾಂಧಿ ವೃದ್ಧಾಶ್ರಮ ದಾವಣಗೆರೆಗೆ ಉಪನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ದಾವಣಗೆರೆರವರು ಭೇಟಿ ನೀಡಿದ ಸಂದರ್ಭದಲ್ಲಿ ಈ ಕೆಳಕಂಡ ನ್ಯೂನತೆಗಳು ಕಂಡು ಬಂದಿದೆ ಎಂದು ವರದಿಯಾಗಿದೆ.

(1) ದಾವಣಗೆರೆ ನಗರದಲ್ಲಿ ಹಾಗೂ ನೂತನ ಬಡಾವಣೆಗಳಲ್ಲಿ ಸಾಕಷ್ಟು ಮನೆಗಳು ಖಾಲಿ ಇದ್ದರೂ ಸಹ ನೆಲಮಹಡಿಯಲ್ಲಿ ಸಂಸ್ಥೆಯ ಮುಖ್ಯಸ್ಥರ ತಂದೆ ತಾಯಿ ಮತ್ತು ಅವರು ವಾಸಿಸುತ್ತಿದ್ದಾರೆಂದು ಇದು ಅವರ ಸ್ವಂತ ಮನವರಿಕೆಯಾಗಿರುತ್ತದೆಂದು ವೃದ್ಧರಿಗೆ ಅಲ್ಲಿ ವಾಸಕ್ಕೆ ಅವಕಾಶವಿಲ್ಲವೆಂದು, ಮೊದಲನೇ ಮಹಡಿಯಲ್ಲಿ 25 ಜನರಿಗೆ ಸಾಕಾಗುತ್ತಿಲ್ಲವೆಂದು ಹಾಗೂ ಶೌಚಾಲಯಗಳು ಇಲ್ಲವೆಂದು.

(2) ಪೀಠೋಪಕರಣಗಳಿವೆ ಆದರೆ ನಿವಾಸಿಗಳೇ ಇಲ್ಲ. ದಾಖಲಾತಿಗಳನ್ನು ಇದುವರೆವಿಗೂ ತೋರಿಸಿರುವುದಿಲ್ಲ.

(3) ಜಾತ್ರೆ/ಉತ್ಸವ ಕಾರಣ ಒಪ್ಪಲು ಸಾಧ್ಯವಿಲ್ಲ ಇದು ಖಾಯಂ ಕಾರಣವಾಗಿರುತ್ತದೆ.

(4) ಒಂದು ದಿನವೂ ಬೋರ್ಡು ಹಾಕಿಲ್ಲ, ಅಕ್ಕಪಕ್ಕದ ಮನೆಗಳಲ್ಲಿ ವಿಚಾರಿಸಿದಾಗ ವೃದ್ಧಾಶ್ರಮ ಇರುವ ಬಗ್ಗೆ ಸಾರ್ವಜನಿಕರಲ್ಲಿ ಮಾಹಿತಿ ಇರುವುದಿಲ್ಲ

(5) ಸ್ವಯಂ ಸೇವಾ ಸಂಸ್ಥೆಯವರು ನಡೆಸುವ ಅಲ್ಪಸ್ವಲ್ಪ ತಪ್ಪುಗಳಿದ್ದಲ್ಲಿ ಒಪ್ಪಿಕೊಳ್ಳಬಹುದು. ಆದರೆ ತೀವ್ರತರವಾದ ಲೋಪದೋಷಗಳಿವೆ.

(6) ಸಂಸ್ಥೆಯ ಮುಖ್ಯಸ್ಥರು ಮತ್ತು ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿ, ಇವರುಗಳು ನೀಡಿರುವ ವರದಿಯು ಒಂದೇ ತೆರವಾಗಿದ್ದು, ವೃದ್ಧಾಶ್ರಮ ಪ್ರಗತಿಯ ಬಗ್ಗೆ ಸಲಹೆ/ಸೂಚನೆಗಳು ವ್ಯರ್ಥವಾಗಿವೆ. ಒಟ್ಟಾರೆ ವೃದ್ಧಾಶ್ರಮ ನಿಯಮಾನುಸಾರ ಸೇವೆಗಳನ್ನು ಒದಗಿಸಲು ವಿಫಲವಾಗಿದೆ.

ಈ ಎಲ್ಲಾ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಕೆ. ಸತ್ಯನಾರಾಯಣಾಚಾರ್, ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿ, ದಾವಣಗೆರೆ, ಇವರಿಗೆ ಸೂಕ್ತ ತಿಳುವಳಿಕೆ ನೀಡುವಂತೆ ಅಥವಾ ಇವರ ವಿರುದ್ಧ ಶಿಸ್ತುಕ್ರಮ ಜರುಗಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ. ಉಪನಿರ್ದೇಶಕರು ನೀಡಿರುವ ವರದಿಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಕೆ. ಸತ್ಯನಾರಾಯಣಾಚಾರ್ ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿ, ದಾವಣಗೆರೆ ಇವರು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳು 1966 ನಿಯಮ 3 ರನ್ವಯ ದುರ್ನಡತೆ ಎಸಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ

ಸದರಿಯವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸುವುದನ್ನು ಬಾಕಿ ಇಟ್ಟು ಸದರಿ ಅಧಿಕಾರಿಯನ್ನು ಕೂಡಲೇ ಸೇವೆಯಿಂದ ಅಮಾನತ್ತಿನಲ್ಲಿಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 151 ಎಸ್‌ಜೆಡಿ 2008 ಬೆಂಗಳೂರು, ದಿ: 10ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಕೆ.ಸತ್ಯನಾರಾಯಣಾಚಾರ್, ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿ, ದಾವಣಗೆರೆ ಇವರನ್ನು ಅವರ ಮೇಲಿನ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಕರ್ನಾಟಕ ನಾಗರಿಕ ಸೇವಾ (ಸಿ.ಸಿ.ಎ) ನಿಯಮಾವಳಿಗಳು 1957ರ ನಿಯಮ 10(1)(ಡಿ)ರ ಮೇರೆಗೆ ತಕ್ಷಣದಿಂದಲೇ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು 1957ರ ನಿಯಮ 98(1)ರನ್ವಯ ಜೀವನಾಂಶ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ. ಅಲ್ಲದೆ ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಸಕ್ಷಮ ಪ್ರಾಧಿಕಾರದ ಲಿಖಿತ ಅನುಮೋದನೆ ಇಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 1076
**ಆರ್.ಎಂ.ಚಂದ್ರಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ–2
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ವಿಷಯ:** ಕರ್ನಾಟಕ ರಾಜ್ಯ ಮಕ್ಕಳ ಹಕ್ಕುಗಳ ರಕ್ಷಣೆ ಆಯೋಗದ ಸಹಾಯಕ ನಿರ್ದೇಶಕರನ್ನು ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಯನ್ನಾಗಿ ಘೋಷಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಮಮಇ 47 ಮಬಾಬ 2006 ದಿ:27.9.2007
2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ಏಕ ಕಡತ ಸಂಖ್ಯೆ:ಮಮಅಇ/ಕರಾಮಹರಆ:ಪ್ರಪತ್ರ:08–09.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿ:27.9.2007ರ ಆದೇಶದಲ್ಲಿ ಮಕ್ಕಳ ಆರೋಗ್ಯ ಪೌಷ್ಠಿಕ ಆಹಾರ ಶಿಕ್ಷಣ, ರಕ್ಷಣೆ ಮತ್ತು ಬೆಳವಣಿಗೆ ಹಿತದೃಷ್ಟಿಯಿಂದ ಮಕ್ಕಳ ಹಕ್ಕು ರಕ್ಷಣೆಗೆ ಆಯೋಗ ಅಧಿನಿಯಮ 2006ರ ಪ್ರಕರಣ 17(1) ರನ್ವಯ 12 ಹುದ್ದೆಗಳನ್ನು ಒಳಗೊಂಡು ಕರ್ನಾಟಕ ರಾಜ್ಯ ಮಕ್ಕಳ ಹಕ್ಕುಗಳ ರಕ್ಷಣೆಯ ಆಯೋಗದ ಸೃಜನೆಗೆ ಮಂಜೂರಾತಿ ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ನಿರ್ದೇಶಕರ ಕಛೇರಿಯ ಏಕಕಡತದಲ್ಲಿ ಕರ್ನಾಟಕ ರಾಜ್ಯ ಮಕ್ಕಳ ಹಕ್ಕುಗಳ ರಕ್ಷಣಾ ಆಯೋಗದ ಕಛೇರಿಯು ಬೆಂಗಳೂರಿನಲ್ಲಿ ಪ್ರಾರಂಭಗೊಂಡಿದ್ದು, ಸದರಿ ಆಯೋಗದ ಚಟುವಟಿಕೆಗಳನ್ನು ನಿರ್ವಹಿಸುವ ಸಲುವಾಗಿ ಸಂಬಂಧಪಟ್ಟ ಖಜಾನೆಯಿಂದ ಆರ್ಥಿಕ ವ್ಯವಹಾರವನ್ನು ನಿರ್ವಹಿಸಲು ಸಂಬಂಧಪಟ್ಟ ಕಛೇರಿಯ ಸಹಾಯಕ ನಿರ್ದೇಶಕರಿಗೆ ಆರ್ಥಿಕ ಪ್ರಾಧಿಕಾರವನ್ನು ನೀಡಬೇಕಾಗಿದೆಯೆಂದು ಅಧಿಕಾರಿ/ಸಿಬ್ಬಂದಿಯವರು ಕರ್ತವ್ಯ ನಿರ್ವಹಿಸುತ್ತಿದ್ದು, ವೇತನ ಭತ್ಯೆ ಹಾಗೂ ಆರ್ಥಿಕ ವೆಚ್ಚ ಭರಿಸಲು ಹಣ ಸೆಳೆಯುವ ಹಾಗೂ ಬಟವಾಡೆ ಅಧಿಕಾರಿಗೆ ಅಧಿಕಾರ ನೀಡಲು ಆರ್ಥಿಕ ಇಲಾಖೆಯ ಆದೇಶ ಪಡೆಯುವಂತೆ ಕೋರಿರುತ್ತಾರೆ.

ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಆರ್ಥಿಕ ಇಲಾಖೆಯ ಅನುಮೋದನೆಯೊಂದಿಗೆ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಮಮಇ 400 ಎಸ್‌ಜೆಡಿ 2008, ಬೆಂಗಳೂರು, ದಿನಾಂಕ:15ನೇ ಸೆಪ್ಟೆಂಬರ್ 2008**

ಮೇಲೆ ವಿವರಿಸಿರುವ ವಾಸ್ತವಾಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಆರ್ಥಿಕ ಸಂಹಿತೆ ಅನುಚ್ಛೇದ 17 (ಸಿ) 49 ಮತ್ತು 50 ರನ್ವಯ ಮಹಾಲೇಖಪಾಲರ ಅಧಿಕಾರ ಪಡೆಯುವ ಷರತ್ತಿಗೊಳಪಟ್ಟು ರಾಜ್ಯ ಮಕ್ಕಳ ಹಕ್ಕುಗಳ ರಕ್ಷಣೆಯ ಆಯೋಗದ ಸಹಾಯಕ ನಿರ್ದೇಶಕರು ಇವರನ್ನು ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಯನ್ನಾಗಿ ಘೋಷಿಸಿದೆ.

ಈ ಆದೇಶವನ್ನು ದಿ:8.9.2008 ಸಂಖ್ಯೆ:ಆಇ 553 ವೆಚ್ಚ–3/08 ರ ಆರ್ಥಿಕ ಇಲಾಖೆಯ ಅನುಮೋದನೆಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 1367
**ಆರ್.ಎಂ.ಚಂದ್ರಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ತಿದ್ದುಪಡಿ ಸಂಖ್ಯೆ:ಅಪಜೀ 27 ಆಇವಿ 2002, ಬೆಂಗಳೂರು, ದಿನಾಂಕ:5ನೇ ಡಿಸೆಂಬರ್ 2008**

ಸರ್ಕಾರದ ಆದೇಶ ಸಂಖ್ಯೆ:ಅಪಜೀ 27 ಆಇವಿ 2002, ದಿನಾಂಕ:30.10.2008ರ ಆದೇಶ ಭಾಗದ 2ನೇ ಕಂಡಿಕೆಯಲ್ಲಿ ವಿಚಾರಣಾಧಿಕಾರಿಗಳು ಮತ್ತು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ರಿಜಿಸ್ಟ್ರಾರ್, ಗುಲ್ಬರ್ಗಾ ವಿಶ್ವವಿದ್ಯಾನಿಲಯ, ಗುಲ್ಬರ್ಗಾ ಎಂಬುದರ ಬದಲಾಗಿ "ಶ್ರೀ ಎಸ್.ಎಸ್. ಲಿಂಗರಾಜು, ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿಕ್ಕಮಗಳೂರು ವಿಭಾಗ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 178
**ಗೋಪಾಲ್**
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.